ಪ್ರೇಮ ಪ್ರಕಟನಾಲಯದ ೧೪ನೆಯ ಪ್ರಕಟನೆ.

# ಚಿಕ್ಕದೊಡ್ಡವರು

(ಹದಿನಾಲ್ಕು ಹರಟೆಗಳು)

ಬರೆದವರು:

**ಶಿವರಾಮ ಕಾರಂತ**

ಬೆಲೆ ಎಂಟಾಣೆ

# ಪ್ರೇಮ ಪ್ರಕಟನಾಲಯದ ಸಲಹೆಗಾರರ ಮಂಡಲ

ಪಂಡಿತ ತಾರಾನಾಥ ರಾಯರು

ಪ್ರೊ. ಆರ್. ವಿ. ಜಾಗಿರದಾರ, ಎಂ.ಎ. (ಲಂಡನ್)

ಪ್ರೊ. ವ್ಹಿ. ಜಿ. ಕುಲಕರ್ಣಿ, ಎಂ.ಎ. ಎಲ್.ಎಲ್.ಬಿ.

ಪ್ರೊ. ಎಸ್. ಎಸ್. ಮಾಳವಾಡ, ಎಂ.ಎ.

ಶ್ರೀಮನ್ ಮಳಿಯೆ ಗೋವರ್ಧನರಾಯರು

ಸಂಪಾದಕರು:

## ಕುಲಕರ್ಣಿ ಶ್ರೀನಿವಾಸ, ಬಿ.ಎ.

ಪುಸ್ತಕ ದೊರೆಯುವ ಸ್ಥಳ:—

**ಪ್ರೇಮ ಪ್ರಕಟನಾಲಯ,**

೩೯, ಅಂಡ್ರುಸನ್ ಸ್ಟ್ರೀಟ್, ಜಿ. ಟಿ. ಮದ್ರಾಸು.

# ಸಂಪಾದಕನ ಮಾತು

ಅನೇಕ ಎಡರು ತೊಡರುಗಳಿಗೆ ಗುರಿಯಾಗಿ ಎರಡು ವರ್ಷಗಳ ದೀರ್ಘ ವಿಶ್ರಾಂತಿಯ ನಂತರದಲ್ಲಿ ಪುನಃ ಈ ಗ್ರಂಥವನ್ನು ಪ್ರಕಟಿಸುತ್ತಲಿದ್ದೇನೆ. ಮದರಾಸಿನಲ್ಲಿ ನೆಲೆಸಿ ಭಾರತೀಯ ನಾಟ್ಯಪ್ರಪಂಚದಲ್ಲಿ ನನ್ನ ಅಲ್ಪ ಸೇವೆಯನ್ನು ಮಾಡಬೇಕೆಂಬ ಮಹತ್ವಾಕಾಂಕ್ಷೆಯ ಜೊತೆಯಲ್ಲಿ ಕೆಲವು ಕನ್ನಡ ಗ್ರಂಥಗಳನ್ನು ಪ್ರಕಟಿಸುವ ಸಾಹಸವನ್ನೂ ಮಾಡಬೇಕೆಂದಿದ್ದೇನೆ.

ಪುಸ್ತಕ ಪ್ರಕಟನೆಯ ವಿಷಯದಲ್ಲಿ ನಿಶ್ಚಿತ ಯೋಜನೆ ಯಾವುದನ್ನೂ ರಸಿಕವಾಚಕರಲ್ಲಿ ಬಿನ್ನವಿಸಿಕೊಳ್ಳಲು ನಾನು ಅಸಮರ್ಥನಾಗಿರುವೆನಾದರೂ ಪುಸ್ತಕ ಪ್ರಕಟನೆಯನ್ನು ಇಷ್ಟು ದೀರ್ಘ ಕೆಲಸದವರೆಗೆ ಇನ್ನೂ ಮುಂದೆ ನಿಲ್ಲಿಸುವುದಿಲ್ಲ ಎಂಬ ಮಾತು ಮಾತ್ರ ನಿಜ. ಏಕೆಂದರೆ ಮದ್ರಾಸಿನಲ್ಲಿಯೆ ಕನ್ನಡ ಮುದ್ರಣ ವಿಭಾಗವೊಂದನ್ನು ಪ್ರಾರಂಭಿಸಿದ್ದೇನೆ.

ಶ್ರೀ ಕಾರಂತರಿಂದ ಹಸ್ತಪ್ರತಿಯನ್ನು ತಂದು ಅನೇಕ ದಿನಗಳು—ಅಲ್ಲ ತಿಂಗಳುಗಳಾದುವು. ಅವರು ಈ ವಿಲಂಬವನ್ನು ಕ್ಷಮಿಸಬೇಕಾಗಿ ಕೇಳಿಕೊಳ್ಳುತ್ತೇನೆ.

ಮಾರ್ಚಿ ೧೯೪೧. ಕುಲಕರ್ಣಿ ಶ್ರೀನಿವಾಸ.

# "ಪ್ರೇಮ"ದ ಪ್ರಕಟನೆಗಳು



| | | |
|---|---|---|
| ೧. | ನರಕದಲ್ಲಿ ನರಸಿಂಹ (ಒಂದು ಸಂಪೂರ್ಣ ನಾಟಕ) | ೦– ೬–೦ |
| ೨. | ಭಾವ ಪ್ರಭಾತ (೧೪ ಸಣ್ಣಕತೆಗಳು) | ೦– ೬–೦ |
| ೩. | ಚಂದ್ರನಾಥ (ಶರಶ್ಚಂದ್ರ ಕಾದಂಬರಿ) | ೦– ೬–೦ |
| ೪. | ನಡುಮನೆಯಲ್ಲಿ (೮ ಏಕಾಂಕ ನಾಟಕಗಳು) | ೦– ೬–೦ |
| ೫. | ನಟಿ (೯ ಸಣ್ಣಕತೆಗಳು) | ೦– ೬–೦ |
| ೬. | ಹತ್ತು ಕತೆಗಳು (೧೦ ಸಣ್ಣಕತೆಗಳು) | ೦– ೬ ೦ |
| ೭. | ಪರಾಗ (೪೨ ಕವನಗಳ ಸಂಗ್ರಹ) | ೦– ೬ ೦ |
| ೮-೯. | ಬಣ್ಣದ ಬೀಸಣಿಕೆ (೭ ಏಕಾಂಕ ನಾಟಕಗಳು) | ೦-೧೨-೦ |
| ೧೦-೧೧. | ಅದ್ಭುತ ರಮ್ಯಕತೆಗಳು (ಗ್ರೀಕ್ ಪುರಾಣದಿಂದ) | ೦-೧೨ ೦ |
| ೧೨. | ಕಾಶ್ಮೀರ ಪ್ರವಾಸ (ಕಾಶ್ಮೀರದ ವರ್ಣನೆ) | ೦ - ೬-೦ |
| ೧೩. | ದೀಪದ ಕೆಳಗೆ (ಸಾಮಾಜಿಕ ಕಾದಂಬರಿ) | ೦– ೮–೦ |
| ೧೪. | ಚಿಕ್ಕದೊಡ್ಡವರು (೧೪ ಹರಟೆಗಳು) | ೦– ೮–೦ |

## ಅಚ್ಚಿನಲ್ಲಿ

| | | |
|---|---|---|
| ೧೫. | ಬೈಗು–ಬೆಳಗು (ಕತೆಗಳ ಸಂಗ್ರಹ) | ೦– ೮–೦ |
| ೧೬. | ಚಾಡಿಯ ಚಾಕು (ಒಂದು ಸಂಪೂರ್ಣ ನಾಟಕ) | ೦– ೮–೦ |

ಪುಸ್ತಕಗಳು ದೊರೆಯುವ ವಿಲಾಸ:

**ಪ್ರೇಮ ಪ್ರಕಟನಾಲಯ,**

೩೯, ಅಂಡ್ರೂರ್ಸ ಸ್ಟ್ರೀಟ್, ಜಿ. ಟಿ. ಮದ್ರಾಸು.

ಪರಿವಿಡಿ

## ಚಿಕ್ಕದೊಡ್ಡವರು - ದೊಡ್ಡಚಿಕ್ಕವರು

೧. ನಮ್ರ ಶಂಭು
೨. ಮ। ರಾ। ರಾ। ಮಾನಪ್ಪನವರು
೩. ಒಟ್ಟುಸಾಟಿ ಶಾಸ್ತ್ರಿಗಳು
೪. ಉದ್ಧಾರದ ಉತ್ತಮರಾಯರು
೫. ಪೀಕದಾನಿ ರಾಮಯ್ಯನವರು
೬. ಸುಧಾರಣೆಯ ಸದಾಶಿವಯ್ಯ
೭. ವಿಲೆವಾರಿ ವಾಸುದೇವಯ್ಯ
೮. ಪ್ರದರ್ಶನದ ಪಾವಪ್ಪನವರು
೯. ಮಸಲ್ ಮಾಧು
೧೦. ಆಶಾವಾದಿ ಅಣ್ಣಪ್ಪಯ್ಯ
೧೧. ಬೇಟಿ ಬಂಡ್ಯಪ್ಪನವರು

## ಮೈಲುಕಲ್ಲಿನೊಡನೆ ಮಾತುಕತೆಗಳು

೧. ಮಿ। ದುಸ್ತುಬಿನ್
೨. ಪರಿತ್ಯಕ್ತ ದೀಪಸ್ತಂಭ
೩. ಗುಡಿಯಿಲ್ಲದ ಮಹಾಲಿಂಗ

# ಚಿಕ್ಕದೊಡ್ಡವರು—

ಈ ಲೇಖಗಳೆಲ್ಲ ನಿಜವಾದ ವ್ಯಕ್ತಿಗಳಿಗೇ ಸಂಬಂಧಿಸಿದವು. ಆದರೆ ವ್ಯಕ್ತಿಗಳ ಹೆಸರನ್ನು ಬಯಲಿಗೆ ತರದೆ, ದೊಡ್ಡವರ ಚಿಕ್ಕತನವನ್ನು ಚಿಕ್ಕವರ ದೊಡ್ಡತನವನ್ನು ತೋರಿಸಿ–ಜನಸಾಮಾನ್ಯರಲ್ಲಿಯೂ ಕಾಣಬಹುದಾದ ಸವಿ ಸೊಗಸು, ಕುಂದು ಕೊರತೆಗಳನ್ನು ತೋರಿಸುವ ಬರೆಹಗಳಿವು. ಲೇಖಗಳು ಸಹಜ ಸಿದ್ಧವಾದ ಹಾಸ್ಯಲಹರಿಯಲ್ಲಿ ಹರಿದರೂ ಚಿತ್ರಗಳು ತೀರ ಸತ್ಯವಾಗಿ ಹೊಳೆಯುವಂಥವು.



# ನಮ್ಮ ಶಂಭು

ನನಗೆ ನಮ್ಮ ಶಂಭುವಿನ ಪರಿಚಯವಾಗಿ ಇಂದಿಗೆ ಕನಿಷ್ಟ ಏಳೆಂಟು ವರುಷಗಳಾದರೂ ಆದುವು. ಈಗ ಶಂಭು ಒಬ್ಬ ಸ್ಕೂಲು ಮಾಸ್ಟರನಾಗಿದ್ದಾನೆ. ಆಗ ಒಬ್ಬ ಸ್ಕೂಲು ವಿದ್ಯಾರ್ಥಿಯಾಗಿದ್ದ. ಈ ನನ್ನ ಪರಿಚಯದಿಂದ, ಸರಾಸರಿ, ಹೇಳಬಹುದಾದ ಸಂಗತಿಯೆಂದರೆ—ಶಂಭುವು ಏರಿಳಿತವಿಲ್ಲದ ಮನುಷ್ಯ. ಇಂದು ಹೇಗೆ ಅವನಿದ್ದಾನೆಯೊ, ಅಂದು ಅಂದರೆ—ನಮ್ಮಿಬ್ಬರ ಪ್ರಥಮ ಮುಲಾಖತ್ ಆದಾಗ—ಹಾಗೆಯೆ ಇದ್ದನು. ಆಗ ಅವನು ಕರಿಶಿಲೆಯ ಗೊಂಬೆಯಂತಿದ್ದನು. ಈಗ ಅವನ ರೂಪವು ಅವನ ನೆರಳಿನ ಬಡ್ಡಿ ತಾಳಿದೆ. ಆಗ ಅವನು ಬುದ್ಧಿಯಲ್ಲಿ ಆರು ವರ್ಷದ ಕೂಸಿನಷ್ಟು ನಿಷ್ಕಲಂಕನೂ, ನಿರ್ಲೇಪಿಯೂ ಆಗಿದ್ದನು. ಈಗ ಇಪ್ಪತ್ತೆರಡು ವರ್ಷದ ಕೂಸಿನಂತೆ ಕಾಣಿಸುತ್ತಾನೆ. ಉಡಿಗೆ ತೊಡಿಗೆ ಎಲ್ಲವೂ ಹಾಗೆಯೆ ಇದೆ. ಆಗಿನಿಂದಲೂ ಮಹಾತ್ಮಾ ಗಾಂಧಿ ಟೋಪಿ, ಅದರ ಉಪಾಂಗಗಳಾದ ಮುಂಡು, ಶರ್ಟು, ಶಾಲುಗಳನ್ನು ಉಡುತ್ತಿದ್ದಾನೆ. ಈಗಲೂ ಅದೇ ಬಣ್ಣದ ಉಡುಗೆ, ಅದೇ ಅಂಚಿನ ಶಾಲು, ಅಷ್ಟೇ ಅಗಲದ ಪಂಚೆಯಲ್ಲಿಯೆ ಅವನು ಕಾಣಿಸಬಹುದು. ತೂಕದ ಮಟ್ಟಿಗೆ ಆಗಿನಕಿಂತಲೂ ಈಗ ಎರಡು ತೊಲೆ ಹೆಚ್ಚಿರಬೇಕು. ಇದು ಅವನ ಶರೀರದ ಬೆಳವಣಿಗೆಯಿಂದಲೂ ಅಲ್ಲ, ಮಿದುಳಿನ ಬೆಳವಣಿಗೆಯಿಂದಲೂ ಅಲ್ಲ—(ಅವನ ಮಿದುಳಿನ ವಿಚಾರ ನೀವೆ ನಿರ್ಧರಿಸಲು ಶಕ್ಯವಿದೆ) ಮುಖ್ಯ ನಾನೊಬ್ಬ ಪತ್ತೇದಾರನಾಗಿದ್ದರೆ, ಶಂಭುವು ತೂಕದಲ್ಲಿ ಸವರಿ ಎರಡು ತೊಲೆ ಹೆಚ್ಚಲು ಕಾರಣವೇನೆಂದು ಊಹಿಸಬಹುದಾದರೆ—ಅದು ಆಗ ಇಲ್ಲದ, ಈಗ ಬೆಳೆದಿರುವ, ಮುಖದ ಮೇಲಿನ ರಿಜರ್ವಡ್ ಫೊರೆಸ್ಟಿನ ದೆಸೆಯಿಂದ.

ನಾನು ನನ್ನ ಜನ್ಮದಲ್ಲಿ ಕಂಡುದು ಒಬ್ಬ ಶಂಭುವನ್ನು. ಅವ ನಂತಿರುವ ಎರಡನೆ ಶಂಭುವನ್ನು ಕಾಣಲಾರದೆ ಹೋದೆ. ಅವನು ಪೂರ್ವ ವ್ಯಕ್ತಿ.—ಎಂದರೆ ನಮ್ಮ ಜಿಲ್ಲೆಯ ಮಾಡಲಿನ ಪುತ್ತೂರಿನವನು.

ಅವನು ಶಹರವೆನಿಸಿದ ಪುತ್ತೂರಿಗೆ ಕೆಲವು ವರುಷಗಳ ಹಿಂದೆ ವಿದ್ಯಾಭ್ಯಾಸಮಾಡುವ ಸಲುವಾಗಿ ಬಂದಿದ್ದನು. ಅದರಿಂದ ನನಗೆ ಅವನ ಪರಿಚಯವಾಗುವ ಕಾರಣವಿರಲಿಲ್ಲ. ಆದರೊಮ್ಮೆ ಅವನಾಗಿ ನನ್ನನ್ನು ಕಾಣಲು ಬಂದನು. ನಾನು ಒಂದು ಬೇಸಗೆಯ ಸಮಯ ಶಾಂತಿ ಶಿಬಿರವೆಂಬೊಂದು—ಬಿಡುಗಾಲದ ಉದ್ಯೋಗ ಕೈಕೊಂಡಿದ್ದೆ. ಒಂದು ತಿಂಗಳ ಅವಧಿಯನ್ನು ಉಪಯುಕ್ತವಾಗಿ ಕಳೆಯಬೇಕೆಂಬ ಉದ್ದಿಶ್ಯ ನನ್ನದಿತ್ತು. ಅದಕ್ಕೆ ಬಂದು ಸೇರುವೆನೆಂಬ ಉತ್ಸಾಹ ಅವನದಿತ್ತು. ಅದಕ್ಕೂ ತುಸು ಮೊದಲು ಅವನ ಗೆಳೆಯನೊಬ್ಬ ಸನ್ಯಾಸಿಯಾಗಿ ಊರು ಬಿಟ್ಟಿದ್ದನಂತೆ. ಇವನೂ ಹಾಗೆಲ್ಲಾದರೂ ಮಾಡಿ ನನ್ನ ತಲೆಯ ಮೇಲೆ ಅಪವಾದ ಹಾಕಬಹುದು ಎಂದು ನನಗೆ ಭಯವಾದರೂ ಅವನ ಸೌಜನ್ಯ ಕಂಡು ಶಿಬಿರಕ್ಕೆ ಸೇರಿಸಿದ್ದಾಯಿತು.

ಶಿಬಿರದ ಕಾಲದಲ್ಲಿ ಇತರ ಹುಡುಗರಂತೆ ಅವನು ಮಾತುಗಾರ ನಾಗಿರಲಿಲ್ಲ. ಉಪನ್ಯಾಸದ ಕಾಲ ಬಂದು ಕುಳಿತರೆ ಉಪನ್ಯಾಸ ಮುಗಿದ ಮೇಲೂ ಎಷ್ಟೋ ಸಮಯ ಹಾಗೆಯೆ ಕುಳಿತಿರುವ. ಎದ್ದು ಹೋಗುವ ತನಕ ಚಾಚೂ ಪ್ರಶ್ನೆಯಾಗಲಿ, ಚಲನೆಯಾಗಲಿ ಇರುತ್ತಿದ್ದಿಲ್ಲ. ನನ್ನೆದು ರಿಗೆ ಕುಳಿತರೆ ಕಣ್ದೆರೆದು ನೋಡುತ್ತ ಕುಳಿತಿರುವ. ಕೆಲವು ಬಾರಿ ಏನನ್ನಾದರೂ ಬರೆದುಕೊಂಡರೂ ಬರೆದುಕೊಳ್ಳುವ. ಉಳಿದ ಸಮಯ ಹಿಂದೀಪಾಠವನ್ನು ಓದುತ್ತಲೊ, ಇಲ್ಲವೆ ರಾಟಿ (ತಕ್ಲಿ) ತಿರುವುತ್ತಲೊ ಇರುತ್ತಿದ್ದ. ಅಂದಿನಿಂದ ಇಂದಿನ ವರೆಗೆ ಅವನು ಹಿಂದೀಪಾಠ ಮುಂದು ವರಿಸುತ್ತಲಿರುವನೆಂದೆ ನನ್ನ ನಂಬುಗೆ. ಆದರೆ ಅವನ ಜ್ಞಾನಕ್ಕೆ ಸರಿಯಾದ ಪರೀಕ್ಷೆಯನ್ನು ಈಗಿನ ಸುಧಾರಣೆಯ ದಿನಗಳಲ್ಲೂ ಹಿಂದೀ ಪ್ರಚಾರ ಸಭೆಯವರು ಇರಿಸಿಲ್ಲವೆಂಬುದು ನನ್ನ ಅಭಿಪ್ರಾಯ. ಮೊನ್ನೆ ಒಂದು ದಿನ ಒಂದು ಕಠಿಣದ ಸಮಸ್ಯೆ ಅವನಿಗೆ ತೋರಿ ಬಂದು

ದರಿಂದಲೊ ಏನೋ—ನನ್ನ ಗೆಳೆಯರೊಬ್ಬರ ಬಳಿಗೆ ಬಂದು—'ಸಾರ್, ಮೆ ಜಾತಾಹೈಯೇ? ಅಥವಾ ಮೈ ಜಾತಾಹೈಯೇ? ಯಾವುದು ಸರಿ?' ಎಂದು ಕೇಳಿದನು. ಪ್ರಾಯಶಃ 'ಹೈ' ಏಕವಚನವಿರಬೇಕು ಎಂದು ನಿರ್ಧರಿಸಿ ಹೋದುದನ್ನು ಕಂಡೆನು.

ಶಂಭುವಿನ ವಿಚಾರ, ಪರಿಶ್ರಮ, ಉತ್ಸಾಹ, ಆದರ್ಶಪ್ರಾಯ ವಾದದ್ದು. ಅವನ ಬುದ್ಧಿ ಸರಣಿ ಹರಿಯುವ ರೀತಿ, ಮಿಂಚಿನ ವಕ್ರತೆ ತೀವ್ರತೆಯನ್ನೆಲ್ಲಾ ಮೀರಿಸುವುದು. ಒಂದು ದಿನ ಅವನಿಗೆ ದೇಶಸೇವೆ ಮಾಡುವ ಉತ್ಸಾಹವಾಗಿ (ಈಗ ಅದು ಸತ್ತಿಲ್ಲ) ನಾನು ಕುಳಿತಲ್ಲಿಗೆ ಬಂದನು. ನಾನಾಗ ಏನನ್ನೊ ಬರೆಯುತ್ತ ಕುಳಿತಿದ್ದೆ. ಆತ ಬಂದು ನನ್ನ ಚಾಪೆಯ ಬಳಿ ಕುಳಿತನು. ನಾನು ಬರೆಯುತ್ತಲೆ ಇದ್ದೆ. ಮುಖವು ಆತನ ಕಡೆಗೆ ತಿರುಗಿತು.

'ಸಾರ್, ಒಂದು ಮುಖ್ಯ ವಿಷಯ ನಿಮ್ಮಲ್ಲಿ ಕೇಳಲು ಬಂದೆ, ಹೇಳಲೋ?' ಎಂದ.

ನನ್ನ ಉತ್ತರವನ್ನು ಊಹಿಸುವ ಶಕ್ತಿ ಅವನಿಗಿದ್ದುದರಿಂದ ನಾನು ಅವನಿಗೆ ಉತ್ತರ ಕೊಡಲಿಲ್ಲ.

'ಸಾರ್, ಮಹಾತ್ಮಾಗಾಂಧಿಯವರು ಈಗ ಸಬರ್ಮತಿಯಲ್ಲಿ ಇಲ್ಲ ವಂತೆ.' 'ಸಬರ್ಮತಿ ಆಶ್ರಮದಲ್ಲಿ ಹತ್ತಿ ಬೆಳೆಯಲು ಕಾರಣವೇನು?' 'ಸಾರ್, ವೈಸರಾಯರು ವಿಮಾನಿನಲ್ಲಿ ಇಗ್ಲೆಂಡಿಗೆ ಹೋಗುತ್ತಾರಂತೆ. ಏನು ಕಾರಣವಿರಬಹುದು?' (ಅವನಿಗೆ ತಿಳಿದಿತ್ತು, ನನಗೂ ವೈಸರಾಯ ರಿಗೂ ತೊಡಗಿದ ಪತ್ರವ್ಯವಹಾರ ನಿಂತು ಬಹಳ ದಿನವಾಗಿತ್ತೆಂದು.) 'ನಿಮಗೆ ಗೊತ್ತಿಲ್ಲಾಂತ ಕಾಣುತ್ತೆ....' 'ಸಾರ್, ನಾನು ಮಾಸ್ಟ್ರು ಆಗುವಾ ಅಂತ ಇದ್ದೇನೆ. ದೇಶಸೇವೆ ಅದರಿಂದ ಆಗಲಿಕ್ಕಿಲ್ಲವೆ?' 'ಸಾರ್, ಜಪಾನಿಯರು ಕೆಂಪು ಬಟ್ಟೆ ಹೆಚ್ಚಾಗಿ ಉಡುತ್ತಿದ್ದಾರೆ. ಏಕೆ ಸಾರ್? ನಮ್ಮ ಲ್ಲಿನ ವಿಧವೆಯರೂ ಅದೇ ಬಣ್ಣದ ಬಟ್ಟೆಯನ್ನುಡುತ್ತಿದ್ದಾರೆ.' 'ಮೊನ್ನೆ ಸಾರ್ ನಮ್ಮ ಊರಿನಲ್ಲಿ ಕೆಡ್ಡವಾಸದ ದಿವಸ ಒಬ್ಬ ಹುಡುಗನನ್ನು

ಗುಂಡು ಹೊಡೆದು ಕೊಂದಿಲ್ಲವೆ? ಅಂದು, ಅಂದರೆ--ಅವರು ಲೈಟು ಹಿಡಿದು ಶಿಕಾರಿಗೆ ಹೋಗಿದ್ದರು. ಹೋದದ್ದು ಸರಿ--ಕತ್ತಲೆಯಲ್ಲಿ ಏನೊ ಎರಡು ಕಣ್ಣು ನೋಡಿ ಹೊಡೆದರು.' 'ಆದರೂ ಸರಿ ಬಿಲ್ಲು ಬಾಣ ಹಿಡಿಯುವುದು ಒಳ್ಳೆಯದೆಂದು ಕಾಣುವುದು ಸಾರ್.' 'ಸಾರ್ ನಿಮ್ಮಣ್ಣ ಈಗ ಎಲ್ಲಿ ಸ್ಕೂಲು ಮಾಸ್ತರರು?'

ಈ ರೀತಿ ರಸವತ್ತಾದ ಸಂಭಾಷಣೆ ನಡೆಯುತ್ತಿತ್ತು. ನಾನು ಬರೆಯುತ್ತಲೆ ಇದ್ದೆ. ಬರೆಹ ಮುಗಿಯಿತು. ಅಂಗಿ ಹಾಕಿಕೊಂಡು ಎಲ್ಲಿಗೊ ಹೊರಡಲು ಅಣಿಯಾದೆ.

'ಪೋಸ್ಟಾಫೀಸಿಗೆಂದು ಕಾಣುತ್ತದೆ' ಎಂದನು ಶಂಭು. ನಾನು ಬೀಗ ಹಾಕಿ ಹೊರಟೆ. ಶಂಭುವು 'ನಾನೂ ಬರಲೇ?' ಎಂದು ಕೇಳಿದನು. 'ಹೂ, ಸರಕಾರಿ ರಸ್ತೆ ಅಲ್ಲವೆ? ಪೋಸ್ಟಾಫೀಸೂ ಸರಕಾರದ್ದು!' ಎಂದೆ. 'ನೀವು ಚೇಷ್ಟೆ ಮಾಡುತ್ತೀರಿ' ಎಂದು ಶೋಧಮಾಡಿದನು. ಈ ಶೋಧನೆಯನ್ನು ಅವನು ಹಲವು ಸಾರಿ ಮಾಡಿ ನನ್ನನ್ನು ಸೋಲಿಸಿದ್ದನೆಂದರೆ ನಿಮಗೆ ಆಶ್ಚರ್ಯವಾದೀತು.

ನಾನು ಹೊರಟವನು ಅಂಚೆಮನೆಗೆ ಹೋಗಿ ಅಲ್ಲಿಂದ ನನಗೆ ಬಂದ ಪತ್ರಗಳನ್ನು ತೆಗೆದುಕೊಂಡು ಹೊರಟೆ. ಶಂಭುವೂ ಹೊರಟನು. ಇಬ್ಬರೂ ಪುತ್ತೂರಿನ ಹಾಸ್ಟೆಲಿನ ಕಡೆಗೆ ಬಂದೆವು. ದಾರಿಯಲ್ಲಿ ಯಾರೊ ಸ್ನೇಹಿತರು ಭೇಟಿಯಾದರು. ಶಂಭು ನಮಸ್ಕರಿಸಲು ಅವರು--'ಶಂಭು ಆ ಕಾರ್ಡು ಟಪ್ಪಾಲಿಗೆ ಹಾಕಿದೆಯಾ?' ಎಂದು ಕೇಳಿದರು. 'ಕಾರ್ಡು ಯಾವುದು? ಹೋ, ಗೊತ್ತಾಯಿತು. ನೀವು ಟಪ್ಪಾಲಿಗೆ ಕೊಟ್ಟದ್ದು ಮನೆಯಲ್ಲಿ ಬಿಟ್ಟಿರಬೇಕು' ಎಂದನು.

ನಾನು--'ಕಿಸೆಯಲ್ಲಿ ಒಂದು ಕಾರ್ಡು ಕಾಣುತ್ತಿದೆ....' ಎಂದೆ.

ಅದರ ನೆನಪಾಗಿ, ಶಂಭುವು ಅದನ್ನು ತೆಗೆದು ನೋಡಲು ಅದೇ ಆ ಕಾರ್ಡು! ಈಗಲೆ ಹಾಕಿ ಬರುವೆನೆಂದು ಅಂಚೆಮನೆಗೆ ಹೋದನು.

ಇನ್ನರೆ ತಾಸಿನಲ್ಲಿ ನಾನು ನಿದ್ದೆಮಾಡಬೇಕೆಂದು ಮಲಗಿದ್ದಾಗ ಶಂಭುವು ಬಂದು ನನ್ನೊಡನೆ—'ಸಾರ್ ಪ್ರೆಸಿಡೆಂಟರಿಗೆ ಹೇಳಿ ಒಂದು ಮಾಸ್ತರಿಕೆ ಎಲ್ಲಾದರೂ....' ಎಂದನು. (ಆಗಲೂ ಕಾರ್ಡು ಕಿಸೆಯಲ್ಲೇ ಇತ್ತು.)

'ಅದಿರಲಿ ಸಾರ್, ಬೇವೂರು ಸುಬ್ಬರಾಯರು ನಾಳೆ ಪೂತ್ತೂರಿಗೆ ಬರುತ್ತಾರಂತೆ ನಿಮಗೆ ತಿಳಿದಿದೆಯೇ?' ಎಂದನು.

ನಾನು—'ಐತಪ್ಪನವರಲ್ಲಿ ಕೋಳಿ ಸಾಕುತ್ತಾರೇನು?' ಎಂದೆ.

ಶಂಭು—'ಸಾರ್, ಅಂದರೆ ಮಾಸ್ತರಿಕೆ ಮಾಡಿದರೆ ದೇಶಸೇವೆ ಆಗಲಿಕ್ಕಿಲ್ಲವೋ? ಹುಡುಗರಿಗೆ ಹಿಂದಿ ಹೇಳಿಕೊಡಬಹುದಿತ್ತು?'

ನಾನು—'ಮೊನ್ನೆ ನಮ್ಮ ಸರಕಾರಿ ಸುಪ್ರವಾಯಿಜರರು ಸುಬ್ರಮಣ್ಯಕ್ಕೆ ಹೋದವರು ಬಂದರೆ?'

ಶಂಭು—'ಅವರಿಗೆ ಹೋಗಲಿಕ್ಕೆ ಆಗಲಿಲ್ಲವಂತೆ. ಸಾರ್, ನಾನು ಬೆಂಗಳೂರಿಗೆ ಹೋಗಿ ಬರುವುದು ಎಂದು ಮಾಡಿದ್ದೇನೆ.'

ನಾನು—'ಬೆಳಗ್ಗೆ ಮಾಡರ್ನ್ ಬಸ್ಸು ಎಳೂವರೆ ಗಂಟೆಗೆ ಪೂತ್ತೂರಿಗೆ ಬರುತ್ತದೆ ಎಂದು ಕಾಣುತ್ತದೆ.'

ಈಗ ಮಧ್ಯಾಹ್ನ ಮೂರುವರೆ ತಾಸು ಸರಿದಿತ್ತು. ನನಗೆ ನಿದ್ದೆ ಬಹಳವಾಗಿತ್ತು. 'ಶಂಭು, ಊಟವಾಗಿದೆಯೆ ನಿನಗೆ' ಎಂದು ಕೇಳಿದೆ.

ಶಂಭುವಿಗೆ ಆ ದಿನ ಇಡೀ ಊಟವಾಗಲಿಲ್ಲವೆಂದು ತೋರಿ ಊಟಕ್ಕೆ ಹೋದನು. ಅದೇ ದಿವಸ ಮನೆಯನ್ನು ಸೇರಿರಬೇಕೆಂದು ನಾನು ಊಹಿಸಿದೆನು.

ಅನಂತರ ಒಮ್ಮೆ ಪ್ರಸಂಗವಶಾತ್ ಶಂಭುವಿನ ಪ್ರಸ್ತಾಪವನ್ನು ಯಾರೊ ನನ್ನೊಡನೆ ತೆಗೆದರು. 'ಏನು ಮಾಡುತ್ತಾನೆ ಅವನು? ಎಲ್ಲಾದರೂ ಮಾಸ್ತರಿಗೆ ಸಿಕ್ಕಿತೆ?' ಎಂದು ಕೇಳಿದೆ. ಆಗ ಅವರು 'ಬೆಂಗಳೂರಲ್ಲಿ ಒಬ್ಬರು ಸನ್ಯಾಸಿಯರಿದ್ದಾರೆ. ಅಲ್ಲಿ ಅವನನ್ನು ಬರ ಹೇಳಿದರಂತೆ. ಹೋಗಿದ್ದಾನೆ' ಎಂದರು. ನನಗೆ ಗಡಿಬಿಡಿಯಾಯಿತು.

ತನ್ನ ಗೆಳೆಯನಂತೆ ಇವನೂ ಸನ್ಯಾಸಿಯಾದರೆ! ಇಷ್ಟರಲ್ಲಿ ಅವನಿಗೆ ಮದುವೆಯೇನೊ ಆಗಿದ್ದಿತು. ಆದರೆ ಸನ್ಯಾಸಿಯಾಗಿರವ ಹೆಂಡತಿ ಅವನಿಗಿದ್ದಳು. ಅವರೆ 'ಹೆಂಡತಿಯನ್ನು ಕರೆದೊಯ್ದಿದ್ದಾನೆ' ಎಂದರು. ನಾನು ಅಚ್ಚರಿಗೊಂಡೆ. 'ಮನೆಗೆ—ತಾಯಿಗೆ ಮೊನ್ನೆ ಕಾಗದ ಬಂದಿದೆ. ತಾಯಿಯನ್ನು ಕರೆದುಕೊಂಡು ಆ ಸಾಧುಗಳ ಬಳಿಯಲ್ಲೆಲ್ಲೊ ಇರುತ್ತಾನಂತೆ' ಎಂದರು ಅವರು.

'ಮೊನ್ನೆ ಕಾಗದ ಬಂದಿದೆಯೆ?'

'ಅಹದು, ನಿನ್ನೆಯಲ್ಲ ಮೊನ್ನೆ' ಎಂದರು.

'ಸರಿ, ಹಾಗಾದರೂ ಸರಿ, ಅಲ್ಲೆಲ್ಲಾದರೂ ಒಂದು ಶಾಲೆ ಸೇರಿ ಹಿಂದಿ ಕಲಿಸಲಿ' ಎಂದೆ ನಾನು.

'ಹಿಂದಿ ಕಲಿಸಲಿಕ್ಕಿಲ್ಲವಂತೆ, ಮಗ್ಗ, ನೂಲು, ಗಾಂಧಿ, ಈ ವಿಚಾರವಂತೆ' ಎಂದರು.

'ಸರಿ, ಮೊದಲಿನಿಂದಲೂ ತಕ್ಲಿ ಹಿಡಿದವನಾದುದರಿಂದ ಒಲವು ಆ ಕಡೆ ಹರಿಯಿತು' ಎಂದೆ.

ನಮ್ಮ ಮಾತುಕತೆ ಮುಗಿಯಿತು. ಶಂಭು ಊರು ಬಿಟ್ಟದ್ದಕ್ಕಾಗಿ ನನಗೆ ಬಲು ಬೇಸರವಾಯಿತು. ಅದೇ ಸಂಜೆ ನಾನು ನನ್ನ ಮಿತ್ರ ಮಾನಪ್ಪನವರೊಡನೆ ಮಂಜಳಗುಡ್ಡದ ಕಡೆ ತಿರುಗಾಟಕ್ಕೆ ಹೋದಾಗ ದೇಶಭಕ್ತ ಶಂಭುವಿನ ಭೇಟಿಯಾಯಿತು. ದಿಗಿಲುಗೊಂಡು ನಾನು 'ಬೆಂಗಳೂರು....' ಎಂದೆ. ಮುಂದಿನ ವಿಚಾರ ಅವನೇ ತೆಗೆದನು.

ಶಂಭು—'ಸಾರ್ ಬೆಂಗಳೂರಿಗೆ ಹೋದದ್ದು ಹೌದು. ಆದರೆ ತಾಯಿ ಅಲ್ಲಿಗೆ ಬರುವುದಿಲ್ಲವೆಂದಳು.'

ಮಾನಪ್ಪ—'ಯಾಕೆ ಹೋದದ್ದು?'

ಶಂಭು—'ಸಾಧುಗಳು ಬರಹೇಳಿದ್ದರು.'

ಮಾನಪ್ಪ—'ಆ ಸಾಧುಗಳೇ! ಬಹಳ ಚೆನ್ನಾಯಿತು.'

ಶಂಭು—'ಆದರೆ ಏಕೊ ಅಲ್ಲಿ ಬಹಳ ಉಪಯೋಗವಿಲ್ಲವೆಂದು ತಿಳಿಯಿತು.'

ನಾನು—'ಅದು ಹೇಗೆ ತಿಳಿಯಿತು?'

ಶಂಭು—'ನಾನು ಹೋದ ದಿವಸವೇ ಒಬ್ಬರು ಹೇಳಿದರು. ಖಾದಿಯಿಂದ ಸ್ವರಾಜ್ಯ ಸಿಕ್ಕಿದರೆ ಇನ್ನೇನು ಎಂದು. ನನಗೂ ಹಾಗೆಯೆ ಕಾಣಿಸುತ್ತಿದೆ.'

ನಾನು—'ಅದು ಸರಿಯಪ್ಪ.'

ಶಂಭು—'ಸಾರ್, ಪ್ರೆಸಿಡೆಂಟರು ಮನೆಯಲ್ಲಿದ್ದಾರೆಯೆ?'

ನಾನು—'ಇನ್ನೆಲ್ಲಿಗೂ ಹೋಗದಿದ್ದರೆ....'

ಶಂಭು—'ಹಾಗಾದರೆ ಮನೆಯಲ್ಲಿದ್ದಾರೆ. ಅವರನ್ನು ನೋಡಿ ಆ ಪಂಚಾಯತ ಶಾಲೆಯಲ್ಲಿ ಒಂದು ಮಾಸ್ತರಿಕೆ!'

* * * *

ಒಂದು ಪ್ರಸಂಗ ಹೇಳಬೇಕಾಗಿದೆ. ನಾನು ಶಂಭುವಿನ ಸಲುವಾಗಿ ಮಾಜಿ ಪ್ರೆಸಿಡೆಂಟ ಶಿವರಾಯರನ್ನು ಕೇಳಿದೆ. ಅವರು ನಗುತ್ತ—'ಯಾರು ಶಂಭುವೊ—ಇತ್ತಲಾಗೆ ಯಾರೂ ಮಾಸ್ತರರು ಸತ್ತಬಗ್ಗೆ ರಿಪೋರ್ಟು ಬರಲಿಲ್ಲ' ಎಂದರು.

* * * *

ಅದು ನಿಜ ಯಾರೂ ಸತ್ತಿರಲಿಲ್ಲ. ಆದರೂ ಶಂಭು ಮಾಸ್ತರ ನೇನೊ ಆಗಿಯೇ ಆಗಿದ್ದಾನೆ. ಚಿಕ್ಕ ಮಕ್ಕಳಿಗೆ ಹಿಂದಿಯನ್ನು, ಖಾದಿಯನ್ನು—(ಅದೇ ಆಗಬೇಕೆಂದು ಒತ್ತಾಯವಿಲ್ಲ, ಮುಖಂಡರು ಹೇಳುವ ಇನ್ನಾವುದನ್ನೊ) ಹೇಳಿ ದೇಶಸೇವೆಯನ್ನು ಮಾಡಬೇಕೆಂಬ ಮನಸ್ಸು ಅವನದು.

ಮೊನ್ನೆ ಅವನ ಶಾಲೆಗೆ ಇನ್ಸ್‌ಪೆಕ್ಟರರ ಸವಾರಿ ಹೋಗಿತ್ತಂತೆ. ಅವನು ಅವರಿಗಾಗಿ ತುಂಬಾ ಮೆಹನತ್ತು ವಹಿಸಿ ಎಳನೀರನ್ನು ತರಿ

ಸಿದ್ದನು. ಅವನು ಅವರ ಬೆನ್ನನ್ನೇ ಬಿಡಲಿಲ್ಲ. ನಾಲ್ಕು ಶಾಲೆಯ ಪರ್ಯಟನೆಯ ವರೆಗೆ, ಉಸಿರು ಬಿಡದೆ, ಅವರ ಹಾಸುಗೆ ಹೊತ್ತು ತಿರುಗಿ ದ್ದಾನೆ. ಇನ್ಸ್‌ಪೆಕ್ಟರರಿಗೂ ಖುಷಿಯಾಗಿರಬೇಕು.

ಇನ್ಸ್‌ಪೆಕ್ಟರರಿಗೆ ಅವನ ಶಾಲೆಯ ಪರೀಕ್ಷೆಯ ಕಾಲದಲ್ಲಿ ಒಂದು ತೊಡಕು ಬಂದಿತ್ತಂತೆ. ಅವರು ಒಮ್ಮೆ ಮೂರನೆಯ ಕ್ಲಾಸಿಗೆ ಹೋಗಿ 'ಹುಡುಗರೇ, ನಮ್ಮ ಘಟ್ಟಗಳಲ್ಲಿ ಅತಿ ಎತ್ತರವಾದ ಶಿಖರವಾವುದು?' ಎಂದು ಕೇಳಿದರಂತೆ. ಆಗ ಶಂಭುವು 'ಕುದುರೇಮುಖ ಅಲ್ಲವೇ ಸಾರ್? ನಾನೂ ಕಾರಂತರೂ ಅಲ್ಲಿಗೊಮ್ಮೆ ಹೋಗಿದ್ದೆವು' ಎಂದನು. ಅದರಿಂದಲೆ ಒಂದು ದಿನ ಅವರು ನನ್ನನ್ನು ಕಂಡೊಡನೆಯೆ 'ಕುದುರೆಮುಖ ಚೆನ್ನಾ ಗಿದೆಯೋ?' ಎಂದು ಕೇಳಿದರು.

ಈ ಎಲ್ಲಾ ಪ್ರಸಂಗಗಳಿಂದ ಶಂಭುವಿನ ವಿಚಾರ ನಿಮಗೆ ತಿಳಿಯ ಬಹುದು. ಸರಿ, ಅವನ ಪರಿಚಯ ಇನ್ನೂ ಆಗಬೇಕೆಂದಿದ್ದರೆ—ಈ ಅನು ಭವಗಳಿಗೆ ೬ರಿಂದಲೋ, ೧೨ರಿಂದಲೋ, ಒಂದು ಗ್ರೋಸಿನಿಂದಲೋ ಗುಣಿಸಿದರಾಯಿತು.



## ★ ★ ಮ। ರಾ। ರಾ। ಮಾನಪ್ಪನವರು

ಮಾನಪ್ಪ ಎಂಬುದು ಬಲು ದೊಡ್ಡ ಹೆಸರು. ಇನ್ನು ಅದನ್ನು ಮ। ರಾ। ರಾ। ಬೆನ್ನು ಹತ್ತುವಾಗ ಅದರ ಅಂತಸ್ತೂ ಒಂದಕ್ಕೆ ಹತ್ತಾಯಿತೆಂದೆ ಲೆಕ್ಕ. ಆದರೆ ಮಾನಪ್ಪನವರ ಅಂತಸ್ತು ಅವರ ಆಳತೆ ಪಟ್ಟಿಯಿಂದ ಸೊನ್ನೆಯೆಂದರೂ ತಪ್ಪಿಲ್ಲ. ಮಾನಪ್ಪನವರ ವೈಶಿಷ್ಟ್ಯವೇನಾದರೂ ಇದ್ದರೆ ಅದು ಅವರ ಸ್ವಪ್ರತಿಷ್ಠೆಯಲ್ಲ. ಪ್ರತಿಷ್ಠಿತ ಮನುಷ್ಯನಿಂದ ಇಲ್ಲದ ಅನ್ಯಾಯವನ್ನು ಮಾಡಿಸಿ, ಪ್ರತಿಷ್ಠೆ ಅದನ್ನು ಕಾಯುತ್ತದೆ ಎನ್ನುತ್ತಾರೆ. ಆದರೆ ಪ್ರತಿಷ್ಠೆ ವಜಾ ಆದರೂ ಅದೇ ಸಂಕಷ್ಟ ಎನ್ನಲು ಮಾನಪ್ಪನವರು ಸಾಕ್ಷಿ.

ಮಾನಪ್ಪನವರ ಪರಿಚಯ ನನಗೆ ಬಲು ಹಿಂದಿನಿಂದ ಇತ್ತು. ಅವರು ಶಾಲೆಗೆ ಹೋಗುವುದನ್ನು ಬಿಟ್ಟು ಇಂದಿಗೆ ಹಲವು ವರ್ಷಗಳಾದುವು. ಅವರು ಶಾಲೆಯ ಹುಡುಗರಾಗಿದ್ದಾಗಲೂ ನಾನು ಅವರನ್ನು ಕಂಡಿದ್ದೆ. ಈಗಲೂ ಕಾಣುತ್ತೇನೆ. ಆಯ ಅಳತೆಯಲ್ಲಿ ಇನ್ನೂ ವ್ಯತ್ಯಾಸವಾಗಿಲ್ಲ. ದುರ್ಬಿನು ಹಿಡಿದು ನೋಡಿದರೆ ಮುಖದ ಮೇಲೆ ಮೀಸೆಯಿದೆ ಎಂದೂ ಅವರು ಬೆಳೆದಿದ್ದಾರೆ ಎಂದೂ ತಿಳಿಯಬೇಕು. ಶರೀರ ಬಲದಲ್ಲಿ ಅವರು ಸ್ಯಾಂಡೋ ಎಂದರೂ ಚಿಂತೆಯಿಲ್ಲ. ಸ್ಯಾಂಡೋ ಜನರಿಗೆ ಮಾಂಸಖಂಡ ಜಾಸ್ತಿ. ಇವರ ಶರೀರದಲ್ಲಿ ಮಾಂಸವೇಕೆ ಮೂಳೆ ಸಹ ಇಲ್ಲ. ಮೂಳೆ ಇಲ್ಲವೆಂದರೂ ಎಂತಹ ಪರ್ವತವೇರಲಿಕ್ಕೂ ಇವರು ಸಿದ್ಧರೇ.

ಮಾನಪ್ಪನವರ ಜತೆಯಲ್ಲಿ ಎರಡು ಮೂರು ಬಾರಿ ನಾನು ಪರ್ವತವೇರಲು ಹೋಗಿದ್ದೆ. ನಮ್ಮ ಜತೆಯಲ್ಲಿ ಇನ್ನೂ ಹಲವು ಗೆಳೆಯರಿದ್ದರು. ಮಾನಪ್ಪನವರಿಗೆ ಅಂಥದರಲ್ಲಿ ಉತ್ಸಾಹ. ತಾವು ಹೊರಡುವಾಗ ಸನ್ಯಾಸಿ

ಗಳಂತೆ ಹೊರಡುವರು. ಬಟ್ಟೆ-ಬರೆ, ಹಾಸಿಗೆ-ಹಂಚಿ, ಯಾವ ತಕಲೀಫೂ ಇಲ್ಲ. ಆದರೆ ಪಯಣ ಮುಗಿಸುವಾಗ, ಅವರ ಬೆನ್ನಮೇಲೆ, ತಲೆಯ ಮೇಲೆ, ಹೆಗಲಮೇಲೆ ಹತ್ತು ಜನರ ಸಂಸಾರ ಕೂತಿರುತ್ತದೆ. ಹೊರಡು ವಾಗ ಅತ್ತಿತ್ತ ನೋಡಿದರು. ಯಾರ ಕೈಯಲ್ಲಿ ಅತಿ ದೊಡ್ಡ ಮೂಟೆ ಯಿದೆಯೊ ಅದನ್ನು ತಾವು ಹೊತ್ತರು. ತಮ್ಮಲ್ಲಿರುವ ನೀರಿನ ಸೀಸೆ ಯನ್ನು ಅವರಿಗೆ ಕೊಟ್ಟರು. ಬೆಟ್ಟ ಏರಲು ತೊಡಗಿದೆವು. ನೀವು ತಾಸಿಗೆ ಕಾಲು ಮೈಲಿನಂತೆ ನಡೆಯಿರಿ, ಆರು ಮೈಲಿನಂತೆ ನಡೆಯಿರಿ— ಮಾನಪ್ಪನವರು ನಿಮಗಿಂತ ಆರು ಫರ್ಲಾಂಗು ಹಿಂದೆ ಇರುತ್ತಾರೆ. ಅದಕ್ಕೂ ಹಿಂದಿಲ್ಲ. ನೀವು ಹೊರಟು ಒಂದು ಫರ್ಲಾಂಗು ಸಾಗಿಲ್ಲ ವಾದರೂ—ಮಾನಪ್ಪನವರು ಸರಿಯಾಗಿ ಆರು ಫರ್ಲಾಂಗು ಹಿಂದೆಯೇ ಇರುತ್ತಾರೆ. ಅವರಿಗೆ ಯಾರನ್ನು ಮಾತನಾಡಿಸುವುದಾದರೂ ಸರಿಯೆ— ಬೆನ್ನಿನ ಹಿಂದೆ ನಿಂತು ಮಾತನಾಡಿಸುತ್ತಾರೆ. ಅವರ ಮುಖ ನೋಡಿ ನೀವು ಜವಾಬು ಕೊಡುವಂತಹ ಪ್ರಸಂಗಗಳನ್ನು ಅವರು ಕಲ್ಪಿಸುವುದೇ ಇಲ್ಲ.

ಸರಣಿ ಬಿಟ್ಟು ಎಲ್ಲೆಲ್ಲೊ ಹೋದೆ. ನಮ್ಮ ಬೆಟ್ಟದ ಪಯಣ ಹೊರಟೆ. ಮಾನಪ್ಪನವರು ಸ್ಥಿರಪ್ರಜ್ಞನಂತೆ—ಚಳಿ ಬಿಸಿ ಅನ್ನದೆ, ಏರುತಗ್ಗೆನ್ನದೆ ನಡೆಯುತ್ತಾರೆ. ದಾರಿಯಲ್ಲಿ ಅವರಂತೆ ಹಿಂದೆ ಬಿದ್ದವರು, ಅಥವಾ ಮುಂದೆ ಹೋಗದವರು ಇದ್ದರೆ ಅವರನ್ನು ಕಂಡು ಕನಿಕರ ಪಡು ತ್ತಾರೆ. ಅವರನ್ನು ಒತ್ತಾಯಪಡಿಸಿ, ಅವರ ಗಂಟನ್ನು ತಾವು ಹೊರು ತ್ತಾರೆ. ಹೀಗಾಗಿ ಬೆಟ್ಟದ ತುದಿಗೆ ಬರುವಾಗ ಅವರು ಶುದ್ಧ ಹೇಸರಗತ್ತೆ ಯಾಗಿರುತ್ತಾರೆ. ಇತ್ತ ಬಿಸಿಲಿನ ಬೇಗೆಯಿಂದ ಎಲ್ಲರೂ ಬಳಲಿ ಬೆಂಡಾ ದರೆ, ಇವರು ಏನಾದರೆಂದು ಬಾಯಿಬಿಡುವುದಿಲ್ಲ. ಅವರು ತಂದ ನೀರಿನ ಸೀಸೆ ಇತರರಿಂದ ಬರಿದಾಗುತ್ತದೆ. ಅವರಾಗಿ ನನಗೆ ನೀರು ಬೇಕು ಎಂದು ಕೇಳುವುದಿಲ್ಲ. ಉಳಿದವರು ಇವರನ್ನು ವಿಚಾರಿಸುವುದು ಕಡಿಮೆ.

ನಿಮ್ಮ ಪ್ರಯಾಣ ಮುಗಿಯಿತು, ಕೆಲವು ಕಾಲ ಸಂದಿತು ಎಂದು ತಿಳಿಯಿರಿ. ಒಂದು ದಿವಸ ನೀವು 'ಮಾನಪ್ಪನವರೇ ನಮ್ಮ ಮೊನ್ನಿನ ಪ್ರಯಾಣ ಹೇಗೆ? ನನಗೆ ಆಯಾಸವಾಗಿ ಕಂಗಾಲಾದೆ ಎಂಥ

ಬಾಯಾರಿಕೆ' ಎಂದರೆ ಅವರು ಪ್ರತಿಯಾಗಿ 'ಹೌದು ಬಹಳ ಬಿಸಿಲು ಬಾಯಾರಿಕೆ ಇತ್ತು ಆ ದಿವಸ' ಎನ್ನುವರು. ಆದರಿಂದ ಆ ದಿವಸ ಬೆಟ್ಟವನ್ನೇರುವಾಗ ಅವರಿಗೆ ಬಾಯಾರಿಕೆಯಾಗಿತ್ತು ಎಂದು ನೀವು ತಿಳಿಯುತ್ತೀರಿ. ಆ ದಿವಸದ ಅವರ ಶರೀರ ಇಲ್ಲವೆ ಆತ್ಮದ ಸಂಕಟ ನಿಮಗೆ ಆಗಲೇ ತಿಳಿಯುವುದೆಂಬುದು ಅಸಾಧ್ಯ.

ಮಾನಪ್ಪನವರಿಗೆ ಎಲ್ಲರನ್ನು ನೋಡಿದರೂ ಆದರ. ನನ್ನನ್ನು ನೋಡಿದರಂತೂ ಹೇಳತೀರದು. ನನ್ನನ್ನು ಪ್ರತ್ಯಕ್ಷ ಋಷಿಯೊ, ಕಾಳಿ ದಾಸನೊ, ಅಥವಾ ಅದಕ್ಕೂ ದೊಡ್ಡ ಇನ್ನೊಬ್ಬನೊ, ಅಂತ ಅವರು ತಿಳಿದುಕೊಳ್ಳುತ್ತಾರೆ. ಅದನ್ನು ಉಜ್ಜಲು ಯಾರಿಂದಲೂ ಸಾಧ್ಯವಿಲ್ಲ. ಆದುದರಿಂದ ನನ್ನನ್ನು ಎದುರಿನಲ್ಲಿಯಾಗಲಿ ಬೆನ್ನ ಹಿಂದೆಯಾಗಲಿ ಹೊಗಳುವುದು ಅವರ ಸ್ವಭಾವ. ಅವರು ಹೊಗಳುವ ಭರದಲ್ಲಿ ಎಲ್ಲಿ ಯಾರೆದುರಿಗೆ ಹೊಗಳಬೇಕು ಎಂಬುದನ್ನು ತಿಳಿದಿರಲಿಲ್ಲ. ಅವರ ಹೊಗಳಿಕೆಗೆ ವಿಶೇಷ ಕಾರಣಬೇಕೆಂದು ತಿಳಿಯಬೇಡಿ. ಕಾರಣವನ್ನೆಲ್ಲಾ ಅವರ ಅಭಿಮತವೇ ಮಾಡುತ್ತದೆ. ಅವರು ಮನವಾರೆ ಹೊಗಳುತ್ತಾರೆ. ಕೆಲವು ಸಾರಿ ನನ್ನನ್ನು ಕಂಡರೆ ಹಲ್ಲು ಕಡಿಯುವವರ ಎದುರಿನಲ್ಲಿಯೂ ಹೊಗಳುತ್ತಾರೆ. ಅವರು ರೇಗಿ ಸಿಟ್ಟಾಗಿ ನನ್ನನ್ನು ತೆಗಳಿದರೆ, ನನಗೆ ಆಗುವ ವ್ಯಥೆಗಿಂತ ಅವರಿಗೆ ಹೆಚ್ಚು. ಹೀಗೆಂದ ಮೇಲಾದರೂ ಹಾಗೆ ಮಾಡುವುದನ್ನು ಬಿಟ್ಟಾರೆಯೆ? ಅದೂ ಇಲ್ಲ. ಅಂಥವರ ಮುಂದೇನೆ ಹೊಗಳಿ, ನನ್ನ ಬಗ್ಗೆ ಬೈಗಳ ಕೇಳಿ ಕೊರಗುವುದು ಅವರ ಸ್ವಭಾವ.

ಇತರರಿಗೆ ಮರ್ಯಾದೆ ಕೊಡುವುದರಲ್ಲಿ ಅವರ ಮೇಲೆ ಜನವಿಲ್ಲ. ಸಾಧಾರಣ ೩೧ ಇಂಚಿನ ಮಹಾನುಭಾವನಾದರೂ 'ನೀವು' ಎಂದೇ ಕರೆಯುತ್ತಾರೆ. ಆ ಮನುಷ್ಯ ಎಲ್ಲಾದರೂ ಭಗವದ್ಗೀತೆ ಓದುವವನೋ ತಕ್ಲಿ ತಿರುಗಿಸುವವನೋ ಇರುವನೆಂದು ತಿಳಿದುಬಿಟ್ಟರೆ ಅವನು ಪರಮ ಗುರುವೆಂದು ತಿಳಿಯುವುದಕ್ಕೂ ಸಿದ್ಧ. ಆಗಾಗ ಅವರು ನನ್ನ ಜತೆಯಲ್ಲಿ ಬರುವುದುಂಟು. ನಾನು ಅವರನ್ನು ಬರಹೇಳುವುದೂ ಉಂಟು. ಆದರೆ ನಾನು ಹೋಗುವಲ್ಲಿಗೆ ಅವರಿಗೆ ಕಾಣಿಸುವ ದೊಡ್ಡ ಮನುಷ್ಯರೊಬ್ಬರು

ಬಂದುಬಿಟ್ಟರೆ—ಇವರು ದೂರವೇ ಸರಿ. ದೂರವೆಂದರೆ ಮನೆಗೆ ಹೋಗುವ ಹಾಗೂ ಇಲ್ಲ. ಇಂದು ಬೆಳಗ್ಗೆ ಬಂದರೆ, ನಾಳೆಯಾದರೂ ಅಲ್ಲೇ ನಿಂತಾರು. ಆದರೆ ನಾನು ಬಂದಿದ್ದೇನೆ, ಕಾದಿದ್ದೇನೆ ಎಂದು ಬಾಯಿಬಿಡುವವರಲ್ಲ. ಅಂಥ ದಾಕ್ಷಿಣ್ಯದ ಮುದ್ದೆ.

ಪರರಿಗೆ ಸಹಾಯ ಮಾಡುವ ಆತುರ ಅಷ್ಟಿಷ್ಟಲ್ಲ ಅವರದು. ತಮ್ಮಿಂದ ಆಗುವುದನ್ನು ಆಗದುದನ್ನು ಸಹಾ ಮಾಡುತ್ತಾರೆ. ಹಣ ಕಾಸಿನ ವಿಚಾರದಲ್ಲೂ, ತಾವು ಮುಣುಗಿ ನರಳಿ, ತಮ್ಮಿಂದ ಕಡಮೆ ನರಳುವವರಿಗೂ ನೆರವಾಗಿದ್ದಾರೆ. ಆದರೊಂದು ವಿಚಾರ—ಅವರಲ್ಲಿ ಎಲ್ಲಾ ಕೆಲಸ ಹೇಳಿದರಾಗದು. ಒಮ್ಮೆ ನಾನು 'ಮಾನಪ್ಪನವರೇ ನಾಳೆ ನಮ್ಮ ಮನೆಗೆ ಮಧ್ಯಾನ್ಹ ಬಂದು ಬಿಡಿ. ಒಂದು ಅಗತ್ಯದ ಕೆಲಸವಿದೆ' ಎಂದೆ. ಮರುದಿನವಲ್ಲ ಅದರ ಮರುದಿನವೂ ಸವಾರಿ ಬರಲಿಲ್ಲ. ಕಾರಣ ಬೇರೆಯವರಿಂದ ತಿಳಿಯಿತು. ಅವರಿಗೆ ಆ ದಿವಸ ಒಂದು ಹಿರಿಯರ ಕೆಲಸವಿತ್ತಂತೆ. ಅದು ಅವರಿಗೂ ತಿಳಿದಿತ್ತು. 'ಬರಲು ಸಾಧ್ಯವಿಲ್ಲ' ಎನ್ನಲು ದಾಕ್ಷಿಣ್ಯ ಬಿಡದೆ, 'ಹೇಳಿಯೂ ಬರಲಿಲ್ಲವಲ್ಲ' ಎಂದು ಪೈಸಿಕೊಳ್ಳುವ ವಿಚಿತ್ರ ಜೀವನ ಅವರದು. ಅವರಲ್ಲಿ ನಾವು ಕೇಳುವ ಪ್ರಶ್ನೆಗಳಿಗೆ ಅವರ ಸ್ಥಿತಿಗತಿ ತಿಳಿದು ನಾವೇ ಉತ್ತರಿಸಿದರೆ ಕ್ಷೇಮ. ಅವರನ್ನು ಕೇಳಿದರೆ ಉಪಯೋಗವಿಲ್ಲ.

ಇಂಥ ಅವಧೂತಮಾರ್ಗ ಮಾನಪ್ಪನವರದು.





## ಒಟ್ಟುಸಾಟಿ ಶಾಸ್ತ್ರಿಗಳು

ಹೋಲ್‌ಸೇಲ್ ವಹಿವಾಟಿನ ವಿನಃ ಚಿಲ್ಲರೆ ವಹಿವಾಟನ್ನು ಎಂದೂ ಮಾಡದ ಸ್ವಭಾವ ನಮ್ಮ ಶಾಸ್ತ್ರಿಗಳದು. ಅದಕ್ಕೆನೆ ಅವರಿಗೆ ಅಂತಹ ಭಾರಿ ಹೆಸರು. ಅವರ ಜೀವನದ ಪ್ರತಿಯೊಂದು ಕೆಲಸವು ಒಟ್ಟುಸಾಟಿ ಯಿಂದಲೆ ನಡೆಯುವುದು. ಚಿಲ್ಲರೆ ಬುದ್ಧಿ, ಚಿಲ್ಲರೆ ವ್ಯಾಪಾರ, ಚಿಲ್ಲರೆ ಕಾರ್ಯ, ಚಿಲ್ಲರೆ ಮಾತು—ಯಾವುದೂ ಇಲ್ಲ ಅವರಲ್ಲಿ. ರಕಂವಾರು ಜನಗಳವರು.

ಅವರ ರೂಪವೂ ರಕಂವಾರು—ಎಂದು ಹೇಳಬೇಕಾಗಿಲ್ಲ. ಸಾಧಾ ರಣ ಎರಡೆರಡು ಟನ್ನಿನ ಮೂರು ಲಾರಿಗಳಿದ್ದರೆ ಅವರನ್ನು ಒಂದೂರಿ ನಿಂದ ಒಂದೂರಿಗೆ ಸಾಗಿಸುವುದು ಸಾಧ್ಯ. ರಕಂ ಹತ್ತು ಥಾನು ಕೋ ಟಿಂಗ್ ಬಟ್ಟೆಯಿದ್ದರೆ ಅವರಿಗೆ ತೆಳ್ಳಗಿನ ಒಂದು ಶರ್ಟು ಆದೀತು. ನೋಟಕ್ಕೆ ಅವರು ಬಲು ಭಯಂಕರ ಕಾಣಿಸುವ ಜನ. ಅವರೆದುರಿಗೆ ಪೂರ್ಣ ಶರೀರವನ್ನು ಕಾಣಲು ನಮ್ಮ ಕಣ್ಣು ಚಿಕ್ಕದೆನಿಸಬಹುದು. ಆದರೆ—ಮುಖ ನೋಡಿದರೆ ಅವರ ಗುರುತು ಹಿಡಿಯುವುದು ಕಷ್ಟವಲ್ಲ. ಇಲ್ಲವಾದರೂ ಇತರ ಜನರು ಅವರ ಸುತ್ತಲಿರುವಾಗ ಕಷ್ಟವಲ್ಲ. ಅವರು ಊರಲ್ಲಿ ತಿರುಗಾಡುವಾಗ ಮಾತ್ರ ತುಂಬಾ ತೊಡಕು; ಕಾರಣ—ಊರಿನ ಬೆಟ್ಟವಾವುದು, ಅವರು ಯಾರು—ಎಂದು ಗುರುತಿಸುವುದು ಕಷ್ಟ. ಆದರೆ ಮುಖದಿಂದ ಅವರನ್ನು ಸುಲಭದಲ್ಲಿ ತಿಳಿಯಬಹುದು. ಯಾವಾ ಗಲೂ ನಗುತ್ತಲಿರುವ ಬಾಯಿ, ಎಲೆ ಅಡಿಕೆಯಿಂದ ಯಾವಾಗಲೂ ಬಾಲ್‌ಶೇವಿಕ್ ಬಣ್ಣ ಅದಕ್ಕೆ. ಅವರ ಎಲೆ ಅಡಿಕೆಯ ಗಿರಣಿ ಯಾವಾ ಗಲೂ ನಡೆಯುತ್ತಲೇ ಇರಬೇಕು. ಅವರ ಮುಖ್ಯಾಹಾರವು ಈ ಮೆಲು

ಕಾಟದಿಂದ ನಡೆಯಬೇಕು. ' ಅನ್ನಬ್ರಹ್ಮದ ದೇಗುಲದಲ್ಲಿ'--ಅವರಿಲ್ಲ. ಮರೆತೆ--'ಅನ್ನಬ್ರಹ್ಮದ ದೇಗುಲ'ವನ್ನು ಕುರಿತು ಬರೆದ ಬೇಂದ್ರೆಯವರ ' ಹಕ್ಕಿ ಹಾರುವುದು'ನ್ನು ಕಂಡರೆ ಶಾಸ್ತ್ರಿಗಳಿಗೆ ಆಗದು.

ಇದರಿಂದ ಶಾಸ್ತ್ರಿಗಳು ಸಾಹಿತಿಗಳು ಎಂದು ನಿಮಗೆ ತಿಳಿದೀತು. ಬರೇ ಸಾಹಿತಿಗಳಲ್ಲ ಉಗ್ರ ಸಾಹಿತಿಗಳು. ಸಾಹಿತ್ಯ ಅಂಗನೆ ಅವರ ಕೈಗೆ ಸಿಕ್ಕಿದರೆ ನಾರಶಿಂಹನಂತೆ ಅವಳ ಕರುಳನ್ನೆಲ್ಲ ಹರಿದು ಕೊರಳಿಗೆ ಮಾಲೆಯನ್ನು ಹಾಕಿಕೊಂಡಾರು. ' ನಡೆದು ನೋಡಿ ಕೊಡಗಿನ ಬೆಡಗನ್ನು' ಕಂಡ ಗುಂಡಪ್ಪನವರು, ' ಮುಡಿಗೆ ಜರಿ' ಬಂದ ಪುಟ್ಟಪ್ಪನವರು, ' ಮಹಾಶ್ವೇತೆ'ಯಾದ ಗೋಕಾಕರು ಅವರ ಸಭಾಗ್ರದಲ್ಲಿ ಸಿಲುಕಿ ಪೇಚಾಡಿದ್ದಾರೆ. ಪುಕ್ಕಟೆಯಾಗಲಿ, ಕೊಂಡಾಗಲಿ, ಕಡವಾಗಿಯಾಗಲಿ ಕೊಂಡು ಕನ್ನಡ ಕವಿತೆಯನ್ನು ಓದಬೇಕು ಅವರಿಗೆ; ಟೀಕಿಸಬೇಕು; ಅವರ ಟೀಕೆಗೆ ಬಲಿಯಾಗದ ಒಬ್ಬರು ಪುಣ್ಯಾತ್ಮರೆಂದರೆ ನಾನು ಮತ್ತು ಗೆಳೆಯ ರಾಜರತ್ನಂರು. ರತ್ನರ ವಿಚಾರ ಹೇಳಬೇಕಿಲ್ಲ. ಅವರು ತಮ್ಮಂತೆಯೇ ಉರುಟಿದ್ದಾರೆಂದು ಶಾಸ್ತ್ರಿಗಳ ಅಭಿಮಾನ. ನನ್ನ ವಿಚಾರ ಏಕೋರಿಯಾಯತಿ ಅವರದು--ನನ್ನ ಗದ್ಯ ಅವರಿಗೆ ಪದ್ಯವಾಗಿಯೂ, ಪದ್ಯ ಗದ್ಯವಾಗಿಯೂ, ಚಂಪೂ ನಾಟ್ಯವಾಗಿಯೂ, ನಾಟ್ಯವು ಲೇಹ್ಯವಾಗಿಯೂ ಕಾಣಿಸುವುದು ಅವರಿಗೆ. ಆದರೆ ಎಲ್ಲರೊಡನೆ ಅವರು ಕಾದುವರೆಂದಲ್ಲ. ಕಾದಾಡತೊಡಗಿದರೆ ಪೀಕದಾಣಿ ಮುಂದಿರಿಸಿದರೆ ರಾಜಿಯಾಯಿತು.

ಇನ್ನೊಂದು ಗುಟ್ಟು ಶಾಸ್ತ್ರಿಗಳದು. ಅವರಿಗೆ ಯಾರ ಕಾವ್ಯದ ಮೇಲೆ ಅತಿ ಮಮತೆಯೋ ಅವರ ಪಾಲಗೇನೆ ಅವರು ನಾರಶಿಂಹರು. ಶ್ರೀ ಶಾಸ್ತ್ರಿಗಳು ಇತರ ಸಾಹಿತ್ಯ ವ್ಯವಸಾಯಿಗಳು ಅಂಬೆ ಗಾಲಿಕ್ಕುವುದನ್ನು ಕಂಡು ಬೇಸರಿಸಿ ತಾವೇ ಅದರ ತಯಾರಿಗೆ ಹೊರಟದ್ದುಂಟು. ಅದರ ವಿಮರ್ಶೆಯನ್ನು ನಾನು ಮಾಡಬಹುದು. /ಶಾಸ್ತ್ರಿಗಳ ವ್ಯಕ್ತಿತ್ವವನ್ನು ವಿಮರ್ಶೆ ಮಾಡುವಾಗ ಅವರಿಗೇನೆ ಅವರ ಕೈಕಾಲುಗಳು ಎಲ್ಲಿವೆ ಎಂದು ಥಟ್ಟನೆ ಕೇಳಿದರೆ ಹೇಳಲು ಕಷ್ಟವಾದೀತು? ಹೀಗಿರಲು ಅವರ ಕವಿತೆಗಳ ಭಾವರಸಗಳನ್ನು ಹುಡುಕಿದರೆ ನಮಗೂ ಫಜೀತಿಯಾದೀತು.

ಈಗ ನಮ್ಮ ಶಾಸ್ತ್ರಿಗಳು ಕನ್ನಡ, ಸಂಸ್ಕೃತ, ಆಯುರ್ವೇದಗಳ ಪಂಡಿತರೆಂದು ಹೇಳಬೇಕು. ತ್ರಿಪಾಂಡಿತ್ಯ ಅವರದು. ಇವರಲ್ಲಿ ಅತಿ ಚಿಕ್ಕ ಸ್ಥಾನವು ಸಾಹಿತ್ಯಕ್ಕೆ.

ಶಾಸ್ತ್ರಿಗಳ ಮುಖ್ಯ ವಿಚಾರ—ಅವರ ಒಟ್ಟು ಸಾಟ ವಿಚಾರ—ಉದ್ಯೋಗಗಳಿಂದ ಪ್ರಸಿದ್ಧವಾದುವು. ಈಗ ನಾವು ಕುಳಿತು ಮಾತ ನಾಡುತ್ತಿರುವಾಗಲೇ ಅವರಿಗೆ ಯಾರಾದರೂ ಡಾ. ವಾರ್ನಾಫರು ಮಂಗನ ಗ್ರಂಥಿಗಳನ್ನು ಜನರಿಗೆ ಕಸಿಕಟ್ಟಿ ಅದರಿಂದ ಮನುಷ್ಯನ ತಾರುಣ್ಯ ವರ್ಧಿಸುತ್ತಾರೆ ಎಂದರೆಂದು ತಿಳಿಯಿರಿ. ನರ—ವಾನರ ಶಬ್ದಗಳಿಗಿರುವ ನಿಕಟ ಸಂಬಂಧ ಶಾಸ್ತ್ರಿಗಳಿಗೆ ಗೊತ್ತು. ಕೂಡಲೆ ಅವರು ವಾನರ ವೀರರ ಕಡೆಗೆ ಮನಸ್ಸು ಹರಿಸುವರು. ಮುಂದೆ ಬಹಳ ದಿವಸಗಳ ತನಕ ಅವರಿಗೆ ಈ ವಾನರ ಸಂಸ್ಥೆ ವಿಚಾರ ಮನಸ್ಸು ಓಡುವುದು.

ಒಂದು ಕಡೆಯಲ್ಲಿ ಒಂದು ಭಾವಿಯನ್ನು ಕೊಂಡು ಒಂದು ಭಾರಿ ಪಂಜರವನ್ನು ಕಟ್ಟಿಸತೊಡಗುವರು. ಇನ್ನೊಂದು ಕಡೆ ಊರಲ್ಲಿರುವ ಮಂಗಗಳನ್ನು ತಂದುಕೊಟ್ಟವರಿಗೆ ತಲಾ ಒಂದರ (ಮಂಗನ) ಒಂ ದೊಂದು ರೂಪಾಯಿಯಂತೆ ಕೊಡುವೆನೆಂದರು. ಯೋಚನೆ ಬಂದ ಮೂರು ದಿವಸಗಳಲ್ಲಿ ಶಾಸ್ತ್ರಿಗಳ ಮನೆಯ ಒಳಗೆ, ಹೊರಗೆ, ಸುತ್ತ ಮುತ್ತ—ಎಲ್ಲಿ ನೋಡಿದರೂ ಮಂಗಗಳು.

೧೦,೨೭೧—ಮಂಗಗಳು ಜಮೆಯಾದುವು. ಅವುಗಳಿಗೆ ಹಲ್ವ, ಮತ್ತು ಇನ್ನಿತರ ಆಹಾರಗಳು ಕೊಡಲ್ಪಟ್ಟವು. ಇದರಿಂದ ಬಹಳ ವೆಚ್ಚ ತಗಲುವುದೆಂದು ಯಾರೊ ಅವರಿಗೆ ಸೂಚಿಸುವರು. ಶಾಸ್ತ್ರಿಗಳು ಮೊದಲು ಈ ಕೋತಿಗಳನ್ನು ಚೆನ್ನಾಗಿ ಬೆಳೆಸಿ ಡಾ. ವರ್ನಾಫರಿಗೆ ಕಳಿ ಸುವ ನಿರ್ಧಾರ ಮಾಡಿದರು. ಆದರೆ ಈಗ ಅವುಗಳನ್ನು ಸಾಕುವ ಪ್ರಶ್ನೆಯನ್ನು ಗಮನಿಸಲಾಗಿ ಹಲ್ವ ತಿನ್ನಿಸಿ ಮಂಗವನ್ನು ಸಾಕಿ ಪೂರೈಸುವಂತಿಲ್ಲ ಎಂದು ನಿರ್ಧರಿಸುವರು.

ಸರಿ, ಒಂದು ತಿಂಗಳಾಗಲು, ಶಾಸ್ತ್ರಿಗಳ ರಾಜ್ಯದಲ್ಲಿ ೨೭೦ ಮಂಗ ಗಳು ಮಾತ್ರ ಶಿಲ್ಕು ಉಳಿಯುವವು. ಹೀಗಾದರಾಗದೆಂದು ಮಂಗಗಳು

ತುಂಬಾ ಮರಿಯಿಕ್ಕುವ ಮತ್ತು ಬೆಳೆಯಲು ಬೇಕಾಗುವ ಆಹಾರವಾವು ದೆಂಬ ಶೋಧನೆಗಾಗಿ ತುಂಬಾ ಹಣ ವ್ಯಯಮಾಡುವರು.

ಹೀಗೆ ಕೆಲವು ಸಮಯ ಸಂದಮೇಲೆ ಶಾಸ್ತ್ರಿಗಳು ಡಾ. ವರ್ನಾಫ ರೊಡನೆ 'ನಿಮಗೆ ಮಂಗಗಳ ಗ್ರಂಥಿಯು ಬೇಕೆ, ಅದನ್ನು ಮುಚ್ಚಿ ಕೊಂಡಿರುವ ಚರ್ಮವಿದ್ದರೆ ಸಾಲದೆ?' ಎಂದು ಪತ್ರವ್ಯವಹಾರ ಬೆಳೆಸು ವರು. ವರ್ನಾಫರು ಮೌನ. ಶಾಸ್ತ್ರಿಗಳು ಬೇಸರಿಸಿ ಈ ಉದ್ಯೋಗ ವನ್ನು ಬಿಡಬೇಕಾಯಿತು.

ಅಷ್ಟರಲ್ಲಿಯೆ ಶಾಸ್ತ್ರಿಗಳು ಒಂದು ದಿನ ನೆರೆ ಹಳ್ಳಿಗೆ ಹೋದರು. ಹಾದಿಯಲ್ಲಿ ಅವರಂತೆ ಆಜಾನುಬಾಹುಗಳಾಗಿ ನಿಂತಿರುವ ತಾಳೆಯ ಮರಗಳನ್ನು ಕಂಡು ಅವರಿಗೆ ಆನಂದ ಉಕ್ಕೇರಿ ಹೊಸ ಸ್ಫೂರ್ತಿ ಬರು ವುದು. ಈ ಮರಗಳು ನಮ್ಮಲ್ಲಿ ತುಂಬಾ ಇವೆ. ಇವುಗಳ ಒಳಭಾಗ ಮೃದು, ಜಳ್ಳು. ಇದನ್ನು ಕಡಿಯಲು ಸುಲಭ. ಮರದ ತಿರುಳಿನಿಂದ 'ಆರ್ಟ್‌ಸಿಲ್ಕ್' ಮಾಡುತ್ತಾರೆ. ತಾಳೆಮರಗಳಿಂದ ಏಕೆ 'ಆರ್ಟ್‌ಸಿಲ್ಕ್' ಮಾಡಬಾರದು?

ಬಡ ಹಿಂದೂದೇಶದಲ್ಲಿ ಒಬ್ಬರೂ ಈ ಕೈಗಾರಿಕೆಗೆ ತೊಡಗಿಲ್ಲ ವೆಂದು ಶಾಸ್ತ್ರಿಗಳು ಈ ಕೆಲಸಕ್ಕೆ ತಮ್ಮ ಸಹಜ ಗುಣದಂತೆ ರಖಂವಾರಿ ಕೈಹಾಕುತ್ತಾರೆ. ಮರುದಿನ ಮನೆಯ ಮುಂದೆ ತಾಳೆಮರಗಳು ಬಂದು ಬಿದ್ದವು. ಅವನ್ನು ತುಂಡುಮಾಡಿ ಗುಜ್ಜು ಮಾಡುವ ಕಷ್ಟ ಕೆಲಸದ ಬದಲು ಇಡೀ ಮರಗಳನ್ನು ನೀರಿನ ಬಾವಿಗಳಿಗೆ ಹಾಕಿ ಕೊಳೆಯಿಸುವರು. ಮರವೆಲ್ಲಾ ಸಾಕಷ್ಟು ಚಟ್ಟಿಯಾಗುವುದು (ಇವರು ಸಹ). ಅನಂತರ ಅದರಿಂದ ನೂಲು ಹೇಗೆ ಮಾಡುವುದು ಎಂದು ಯೋಚಿಸುವರು. ಹಿಂದುಸ್ಥಾನದ ಉದ್ಧಾರಕ್ಕೆ ಬೆಲೆಯುಳ್ಳ ಯಂತ್ರಗಳ ಕೈಗಾರಿಕೆಯು ಉಪಯೋಗವಿಲ್ಲವೆಂದು ಅವರಿಗೆ ತಿಳಿದಿದೆ. ಅದು ಕಾರಣ ಅವರು ಕೈಗಾರಿಕೆಯ ಸಲುವಾಗಿ ಮನೆಯಲ್ಲಿರುವ ಸೇವಿಗೆ ಅಚ್ಚುಗಳನ್ನು ಉಪ ಯೋಗಿಸಲು ನಿರ್ಧರಿಸುತ್ತಾರೆ.

ತಾಳೆಮರದ ಚಣಿಯನ್ನು ಸೇವಿಗೆ ಅಚ್ಚಿನಲ್ಲಿ ಒತ್ತಿ ನೂಲು ಮಾಡುತ್ತಾರೆ. ಕ್ರಮೇಣ ಆ ನೂಲು ದಪ್ಪವಾಯಿತೆಂಬ ಶೋಧೆಯಾಗುವುದು. ಅದಕ್ಕೂ ಸಪುರ ಚಿರಡೆಗಳನ್ನು ಉಪಯೋಗಿಸುವರು. ಆ ನೂಲು ಮುಂದೆ ನೇಯುವುದಕ್ಕೇ ಬರುವುದಿಲ್ಲವೆಂದು ನೌಕರರ ತಕ್ರಾರು ಬರಲು ಅವರು ನಿರಾಶರಾಗಬೇಕಾಗುವುದು.

ಇಂತಹ ನೂರಾರು ಒಟ್ಟುಸಾಟಿ ಕಾರಭಾರು ಮಾಡುತ್ತಿರುವವರು ನಮ್ಮ ಶಾಸ್ತ್ರಿಗಳು. ಇದರ ಉದ್ದೇಶ! ನೀವೆನ್ನಬಹುದು ಕಾಸುಮಾಡಲು ಎಂದು. ಅವರು ಮಾತನಾಡುತ್ತ ಇರುವಾಗ ಸಾವಿರ ರೂಪಾಯಿ ಪ್ರೋಮಿಸರಿ ನೋಟಿಗೆ ಅವರಿಗೇ ತಿಳಿಯದಂತೆ ಅವರಿಂದ ಸಹಿ ಹಾಕಿಸಲು ಸಾಧ್ಯವಿದೆ! ಹೀಗಿರುವಾಗ ಅವರಲ್ಲಿ ಆಯದ ವಿಚಾರವಾಗಿಯಾಗಲಿ, ತಮ್ಮ ವಿಚಾರವಾಗಿಯಾಗಲಿ ಯೋಚನೆಯೇ ಇರುವುದಿಲ್ಲ.





# ಉದ್ಧಾರದ ಉತ್ತಮರಾಯರು

ಸಾರ್ವಜನಿಕ ಚಳವಳಿಗಳಲ್ಲಿ ಭಾಗವಹಿಸಬೇಕು, ಜನರಿಗೆ ಏನಾದರೂ ಮಾಡಿ, ಅವರನ್ನು ಹೇಗಾದರೂ ಉದ್ಧರಿಸಬೇಕು—ಎಂಬುದು ಉತ್ತಮರಾಯರ ಉತ್ತಮ ಹಂಬಲ. ಉತ್ತಮರಾಯರು ಸಿರಿವಂತರಲ್ಲ. ಆದರೆ ಹೇಗಾದರೂ ಮಾಡಿ ಸಿರಿವಂತರನ್ನು ಕಾಲುಕಟ್ಟಿಯಾದರೂ ಕೆಲಸಮಾಡಿಕೊಳ್ಳುವ ಚಮತ್ಕಾರ ಬಲ್ಲವರು. ಅವರಿಗೆ ಯಾವಾಗಲೂ ಜನರಲ್ಲಿ ಕಾಣುವ ಕೊರತೆಯೆಂದರೆ—ಜನರು ರಸಿಕರಾಗಿಲ್ಲವಲ್ಲಾ ಎಂದು. ಜನರು ಹೇಗಾದರೂ ರಸಿಕರಾದರೆ ಸಾಕು ಎಂದು ಹೋರಾಡುವಂಥವರು. ಈ ಹೋರಾಟದಲ್ಲಿ ಕಪಟವಿಲ್ಲ. ಅನ್ನ ನೀರು ಬಿಟ್ಟು—ನಾಳೆ ದಿವಸ ಅಖಿಲ ಭಾರತ (ಸಾಧ್ಯವಾದರೆ ಅಂತರ್ಜನಾಂಗಿಕ) ರಂಗವಲ್ಲಿ ಪರಿಷತ್ತು ಕರೆಯಬೇಕೋ—ಅವರು ಸಿದ್ಧರು. ಈ ವಿಷಯವಾಗಿ ಯಾವುದಾದರೂ ಪತ್ರಿಕೆಯಲ್ಲಿ ಲೇಖನ ಬರೆಯಬೇಕೋ—ಅವರು ಸಿದ್ಧರು. ಇದಕ್ಕೆಲ್ಲಾ ಹಣ ಬೇಡವೇ? ಬೇಕು—ಕೂಡಿಸುತ್ತಾರೆ. ಕಾಕಪ್ಪನವರಿಂದ ಹಿಡಿದು ಪೋಕಪ್ಪನವರ ತನಕ ಹೋಗಿ ಬೇಡುತ್ತಾರೆ.

ಒಮ್ಮೆ ಅವರಿಗೆ ಅಖಿಲಭಾರತ ರಂಗವಲ್ಲಿ ಪರಿಷತ್ತನ್ನು ಕರೆಯುವ ಮನಸ್ಸಾಯಿತು. ರಂಗವಲ್ಲಿ ಎನ್ನುವುದು ಮನುಷ್ಯನ ಸವಿಗಾರಿಕೆಯ ಪ್ರಥಮ ಚಿನ್ಹವಷ್ಟೇ! ಪರಿಷತ್ತನ್ನು ಕರೆದರು. ಪರಿಷತ್ತು ಅವರ ಮನೆಯಲ್ಲಿ, ಅನುಕೂಲವಿಲ್ಲವಾದರೆ ಊರಿನ ನಾಟಕಶಾಲೆಯಲ್ಲಿ ಕರೆಯುವುದೆಂದು ನಿರ್ಣಯವಾಯಿತು. ಆ ಗಳಿಗೆಯಿಂದಲೇ ಹ್ಯಾಂಡುಬಿಲ್ಲು ಹಂಚಿದರು. 'ರಂಗವಲ್ಲಿ ಇಲ್ಲದೆ ಯಾವದೇಶದ ಉದ್ಧಾರವಾಗಲಾರದು. ಆದುದರಿಂದ ಕನ್ನಡಿಗರ ಪ್ರಥಮ ರಂಗವಲ್ಲಿ ಪರಿಷತ್ತು ಕರೆಯಲೇಬೇಕು' ಎಂದು ಸಾರಿದರು. ಸ್ವಾಗತ ಸಮಿತಿಗೆ ಜರಿಯ ಮುಂಡಾಸಿನವರೆಲ್ಲರೂ ಸೇರಿಸಲ್ಪಟ್ಟರು.

ಮಂಗಳೂರಿನ ಮುಂದಾಳುಗಳಾದ ಶ್ರೀ ಬಸವಣ್ಣನವರು, ಆನಂದಪ್ಪನವರು, ಕೋಟ್ಯಪ್ಪನವರು ಎಲ್ಲರೂ ಸ್ವಾಗತಮಂಡಲದ ಸದಸ್ಯರು ಆದರು. ಊರಿನ ಪ್ರತಿಯೊಂದು ಸಭೆ, ಮಂಡಲಕ್ಕೆ ಅವರೇ ಸಾರ್ವಜನಿಕ ಅಧ್ಯಕ್ಷರೋ ಉಪಾಧ್ಯಕ್ಷರೋ ಆದುದರಿಂದ ಅವರನ್ನು ಸೇರಿಸಿಕೊಂಡರು. ಮಂದಿ ಬಾರದ ಆರೆಂಟು ಕಾರ್ಯಕಾರಿಮಂಡಲದ ಸಭೆಗಳು ಜರುಗಿದವು. ಉತ್ತಮರಾಯರೇ ಪ್ರೊಸೀಡಿಂಗು ಬುಕ್ಕನ್ನು ಪ್ರತಿಯೊಬ್ಬರ ಮನೆಗೂ ಒಯ್ದು ಕೂತಲ್ಲಿಂದ ಸಭೆ ಕೂಡಿಸಿದರು. ಶ್ರೀ ಕೋಟ್ಯಪ್ಪನವರು ಸ್ವಾಗತ ಮಂಡಲಕ್ಕೆ ಅಧ್ಯಕ್ಷರಾದರು. ಊರಿನ ಶವದಹನ ಮಂಡಲ, ಸಮಗಾರ ಕೂಟ, ಲಲಿತಕಲಾ ಕೂಟ, ವಿದ್ಯಾವರ್ಧಕ ಸಂಘ, ವೇದಾಂತ ಸಂಘ, ಥಿಯಾಸಫಿಕಲ್ ಲಾಜ್, ಆರ್ಯ ಸಮಾಜ ಮೊದಲಾದ ಸಂಸ್ಥೆಗಳಿಗೆ ಅವರೇ ಅಧ್ಯಕ್ಷರಾದುದರಿಂದ— ಇವರೇ ಸ್ವಾಗತಸಮಿತಿಗೆ ತಕ್ಕವರೆಂದು ನಿರ್ಣಯಿಸಿದರು.

ಇನ್ನು ಪರಿಷತ್ತಿನ ಅಧ್ಯಕ್ಷರು ಯಾರು? ಬಲು ಪಜೀತಿಯ ಪ್ರಶ್ನೆ. ಜನ ಕೂಡಬೇಕು, ಕಾಸೂ ಬೇಕು, ಏನು ಉಪಾಯ? ಶ್ರೀಮತಿ ಮಿಸ್ ನೂರ್‌ಜಾನ್ ಬೇಗಮರು ಆಗಲೇ ಭೋರ್ ಘಾಟಿನಿಂದ ಬಂದಿದ್ದರು. ಅವರು ತಮಗೆ ಇದು ಸಲ್ಲದ ಕೆಲಸವೆಂದರು. ಆದರೂ 'ತಾವು ಶ್ರಮವಹಿಸುವ ಕಾರಣವಿಲ್ಲ—ಬರೇ ಒಂದು ಲೆಕ್ಚರು ಕೊಟ್ಟರೆ ಸಾಕು' ಎಂದು ಸಮಾಧಾನ ಪಡಿಸಿದರು.

ಪರಿಷತ್ತಿನ ದಿನ ಬಂದಿತು. ಉತ್ತಮರಾಯರ ಮನೆ ಸಾಲದೆಂದು ಊರಿನ ನಾಟಕ ಶಾಲೆಯಲ್ಲಿ ಅದನ್ನು ಪ್ರಾರಂಭಿಸಿದರು. ಸಾವಿರಾರು ಮುದ್ದುಮಣಿಯರು ಬಂದಿದ್ದರು. ರಂಗವಲ್ಲಿ ಮುಖವನ್ನು ಕಾಣದ ಮಿಸ್. ಸುಬ್ಬುಲಚ್ಮಿಯವರು ಬಂದು ಮಿ। ಉತ್ತಮರಾಯರಿಗೆ ಶೇಕ್ ಹ್ಯಾಂಡ್ ಮಾಡಿದರು. ಮಿ। ಕೋಟ್ಯಪ್ಪನವರಿಗೆ ಉತ್ತಮರಾಯರೇ ಬೇಗಮರ ಪರಿಚಯಮಾಡಿಕೊಟ್ಟರು. ಅಂದಿನ ಪರಿಷತ್ತು ಯಶಸ್ವಿಯಾಯಿತು. ಬೇಗಮರು ಉರ್ದು ಮಾತಿನಲ್ಲಿ ರಂಗವಲ್ಲಿ ಅತಿ ಅವಶ್ಯವೆಂದು ಒಂದು

ಮಾತು ಹೇಳಿ ಅರ್ಥಶಾಸಿನ ತನಕ ಶಿಶು ಸಂಗೋಪನೆಯ ವಿಚಾರ ಮಾತ ನಾಡಿದರು. ಅಂತೂ ಸಭೆಯು ಯಶಸ್ವಿಯಾಯಿತು.

ಸಭೆಯು ಜರುಗಿದ ಒಂದು ವಾರದಲ್ಲಿ ಉತ್ತಮರಾಯರ ಮನೆಯ ಅಂಗಣ ಹುಡುಕಿ ನಾನೇ ಹೋಗಿದ್ದೆ. ಅವರ ಮನೆಯ ಹೊಸ್ತಿಲಿನಲ್ಲಿ ರಂಗ ವಲ್ಲಿಯೊಂದಲ್ಲದೆ ಇನ್ನೇನೂ ಇತ್ತು. ಅವರು ನನ್ನನ್ನು ಭೇಟಿಯಾದರು. ನಮಸ್ಕರಿಸಿದರು. ಅವರಿಗೆ ನಾನೆಂದರೆ ಪ್ರಾಣ. ಕರ್ಣಾಟಕಕ್ಕೆ ತಲೆಯ ಒಬ್ಬ ಬ್ರಹ್ಮನಿದ್ದರೆ ಅದು ನಾನೆಂದು ಹೇಳಿದ್ದಾರೆ. ಹೀಗೆ ಹೇಳುವ ಸಲುವಾಗಿಯೇ ಒಂದು ಸಂತೋಷಕೂಟ ಏರ್ಪಡಿಸಿದ್ದರು. ಈ ಕೂಟಕ್ಕೆ ಹಿಂದಿನ ರಂಗವಲ್ಲಿ ಪರಿಷತ್ತಿನ ಸ್ವಾಗತಸಮಿತಿಯೇ ಸೇರಿತ್ತು. ಅಲ್ಲಿ ಅವರು ನನ್ನ ಪರಿಚಯಮಾಡಿಸಿ " ಶ್ರೀ ಕಾರಂತರು ಕಲಾವಂತರು, ಅವರು ಎಷ್ಟೋ ನಾಟಕಗಳನ್ನು ಬರೆದಿದ್ದಾರೆ ಅವುಗಳಲ್ಲಿ ಎಷ್ಟೋ ನಾಟಕಗಳು ಗುಬ್ಬಿ ವೀರಣ್ಣನವರ 'ಪ್ರಭಾಮಣಿ' ಯಂತೆ ರಸ, ಭಾವ, ಕಳಾ, ಸಂಗೀತ, (ಧಾತು?) ಪುಷ್ಟವಾಗಿವೆ" ಎಂದು ಚಪ್ಪಾಳೆ ಹೊಡೆದು ನನಗೆ ಹಾರ ಹಾಕಿದರು. ಎಲ್ಲರೂ ಚಪ್ಪಾಳೆ ಹೊಡೆದರು. ನನ್ನ ಒಂದು ಕೈಯಲ್ಲಿ ಹಾರವಿದ್ದುದರಿಂದ, ಬರೇ ಒಂದು ಕೈಯಿಂದ ಹಣೆಯನ್ನು ಸವರಿಕೊಂಡೆ.

ಅದೇ ದಿನ ಸಭೆ ಮುಗಿಯುವ ಮೊದಲು "ನಾನು ಸಧ್ಯದಲ್ಲಿಯೇ 'ಕುಂಕುಮ - ವಿಭೂತಿ' ಪರಿಷತ್ತನ್ನು ಕರೆಯ ಬೇಕೆಂದಿದ್ದೇನೆ. ನಮ್ಮ ಆರ್ಯ ಮಹಿಳೆಯರು ಇನ್ನು ಚೆನ್ನಾಗಿ ಹಣೆಯನ್ನು ಶೃಂಗಾರಿಸಲಾರರೆಂದರೆ ತೀರ ವಿಷಾದದಾಯಕವಾಗಿದೆ" ಎಂದು ಎಲ್ಲರನ್ನು ಬೀಳ್ಕೊಟ್ಟರು. ಆ ವಿಚಾರವಿನ್ನೂ ಅಪಕ್ವ ಸ್ಥಿತಿಯಲ್ಲಿದೆ. ಮಿ। ಗುಡ್ ಬರೋ ಸಾಹೇಬರಿಗೆ ಅವಕಾಶವಾಗದ್ದರಿಂದ ಪರಿಷತ್ತು ಮುಂದರಿಸಲ್ಪಟ್ಟಿದೆ ಎಂದು ಅವರು ನನಗೆ ಹೇಳಿದರು.

ಉತ್ತಮರಾಯರಿಗೆ—ಅರ್ಥಶಾಸ್ತ್ರ, ನೀತಿಶಾಸ್ತ್ರ, ನ್ಯಾಯ ಶಾಸ್ತ್ರ, ಮೊದಲಾದ ಹಲವು ಶಾಸ್ತ್ರಗಳಲ್ಲಿ ಪರಿಚಯ. ಪರಿಚಯವಷ್ಟೇ

ಏಕೆ ಪ್ರೇಮವೂ ಇದೆ. ಅವರು ಮಿ| ರಾಚಪ್ಪನವರ ಶ್ರೀ ಬಸವೇಶ್ವರ ಕರ್ಣಾಟಕ ಸಂಗೀತ ನಾಟ್ಯಕಲಾ ವಿವರ್ಧಕ ಸಂಘದ ಅಂತದ ಫರದೆಯ ಡಿಸೈನಿಗೆ ಮೆಚ್ಚಿ ಅದರ ಫೋಟೋವನ್ನು ತಮ್ಮ ದೇವರ ಕೋಣೆಯಲ್ಲಿ ಇರಿಸಿದ್ದಾರೆ. ಆ ಫರದೆಯನ್ನು ಬ್ರಿಟೀಶ್ ಆರ್ಟ್ ಎಗ್ಝಿಬಿಷನ್ನಿಗೆ ಕಳಿಸುವ ಯೋಚನೆ ಅವರಿಗಿತ್ತು. ಆದರೆ ಅಷ್ಟರಲ್ಲೆ ಕಂಪೆನಿಯವರು ಈ ಅಮೂಲ್ಯ ಕಲಾಸಂಪತ್ತನ್ನು ರಾಣಿಬೆನ್ನೂರಿನ ಕಾಫಿಹೋಟಲನ ಮಾಲಕರೊಬ್ಬರಿಗೆ ಅಡುವಿರಿಸ ಬೇಕಾಯಿತು.

ಉತ್ತಮರಾಯರು ಸಂಗೀತ ಪ್ರಿಯರು. ಅವರ ಸೋದರಿಯೊಬ್ಬರಿಗೆ ಅವರು ದಕ್ಷಿಣಾದಿ ಸಂಗೀತ ಪ್ರಾಕ್ಟೀಸು ಕೊಡಿಸಿದ್ದರು. ಆದರೆ—ನಮ್ಮ ಸಂಗೀತವು ಇನ್ನೂ ಜಡಾವಸ್ಥೆಯಲ್ಲಿಯೇ ಇದೆ ಎಂದು ಸಂಗೀತವನ್ನು ಸುಧಾರಿಸಲು ಯತ್ನಿಸಿದ್ದಾರೆ. ಈಗ ಅವರ ಸೋದರಿಯು ತ್ಯಾಗರಾಜರ "ಮೋಕ್ಷಮು ಗಲದಾ" ಕೃತಿಯನ್ನು "ಬರಾತೋ ಪ್ರೇಮ" ವೆಂಬ ಮರಾಠಿ ಹಾಡಿನಂತೆಯೆ ಹಾಡಲು ಕಲಿತಿದ್ದಾರೆ. ತ್ಯಾಗರಾಜರ "ಎವರುನೆ" ಹಾಡನ್ನು ತಮಿಳಿನ "ಅಂಡಿಪಂಡಾರವು" ನಂತೆ ಪ್ರಾರಂಭಿಸಿ "ಗಾಂಧಿ ಮಹಾರಾಜಾಂ" ಎಂಬಂತೆ ಸಾಗಿಸಿ "ಚರಖಾ ಚಲಾ ಚಲಾಕೆ" ಎಂಬಂತೆ ಮುಗಿಸುತ್ತಾರೆ. ಆ ಹಾಡನ್ನು ಕೇಳಿದ ಉತ್ತಮರಾಯರ ಗೆಳೆಯರೆಲ್ಲ "ಇದು ಬಿಥೋವನ ಸಿಂಫನಿಯಂತೆ ಇದೆ ಎಂದು ಹೇಳಿದ್ದಾರೆ" ಎಂದು ನನಗೆ ತಿಳಿಸಿದರು. "ನಿಮ್ಮ ಅಭಿಪ್ರಾಯವೇನು ಸ್ವಾಮಿ?" ಎಂದು ನನ್ನನ್ನು ಕೇಳಿದರು. "ನನಗೆ ಬಿಥೋವನ ಭೇಟಿಯಾಗಿಲ್ಲ. ಅವನು ಮಂಗಳೂರಿಗೆ ಬಂದಿದ್ದನೇ?" ಎಂದು ಕೇಳಿದೆ.

ಅಷ್ಟರಲ್ಲಿ ಅವರ ಮನಸ್ಸು ಎರಡನೆ ರಂಗವಲ್ಲಿ ಪರಿಷತ್ತಿನ ಕಡೆ ಹರಿಯಿತು. ಅದನ್ನು ಲಕ್ನೋವಿನಲ್ಲಿ ಜರುಗಿಸಿ, ಕರ್ಣಾಟಕದ ರಂಗವಲ್ಲಿ ಕ್ರಮವನ್ನು ಹಿಮಾಲಯದ ತನಕ ಸಾರುವಂತೆ ಮಾಡಬೇಕೆಂಬ ಅಭಿಲಾಷೆಯಿದೆ ಎಂದರು.

ಶ್ರೀ ಉತ್ತಮರಾಯರು ಇನ್ನೂ ಕೆಲವು ವರುಷವಿದ್ದರೆ ಕನ್ನಡ ನಾಡಿನ ರಂಗವಲ್ಲಿ, ಕುಂಕುಮ, ತಾಂಬೂಲವಿಧಿ, ಅರ್ಥಶಾಸ್ತ್ರ ಮೊದ

ಲಾದ ವಿಷಯಗಳಲ್ಲಿ ಪ್ರಗತಿಗೊಂಡು ಕೆಲವು ವರ್ಷಗಳಲ್ಲಿ ಜರ್ಮನಿ, ಅಮೇರಿಕ, ಜಪಾನ ಮೊದಲಾದ ದೇಶಗಳ ವಿದ್ಯಾರ್ಥಿಗಳನ್ನು ಬರಮಾಡೀತೆಂದು ನನಗೆ ನಂಬುಗೆಯಿದೆ. ಯಾವುದಕ್ಕೂ ಯುರೋಪಿನ ರಾಜಕೀಯ ವಾತಾವರಣವು ಅಸ್ಥಿರವಾಗಿ ಭವಿಷ್ಯವು ಇದಕ್ಕೆ ಅವಕಾಶ ಕೊಟ್ಟೀತೆ" ಎಂಬ ವಿಷಯದಲ್ಲಿ ನನಗೆ ಸಂಶಯವಿದೆ.





# ಪೀಕದಾನಿ ರಾಮಯ್ಯನವರು

ಪೀಕದಾನಿ ಏನೆಂದು ಎಲ್ಲರಿಗೂ ಗೊತ್ತಿದೆ. ಆ ಹೆಸರು ಏಕೆ ಬಂದಿತು ಎಂಬುದು ಹೇಳಬೇಕಾದ ಮಾತಲ್ಲ. ರಾಮಯ್ಯನವರಿಗೆ ಆಹಾರದಲ್ಲಿ ಅತಿ ಬಯಕೆಯಿಲ್ಲ. ಚೆನ್ನಾದ ತಿಂಡಿಯನ್ನು ತಕ್ಕಮಟ್ಟಿಗೆ ತುಂಬಾ ತಿನ್ನಬೇಕೆಂಬುದು ಅವರ ಸಹಜ ಸ್ವಭಾವ. ಹೀಗಿರಲು ತಾಂಬೂಲ ಚರ್ವಣದ ವಿಚಾರ ಅವರು ಲೋಭಿಗಳಾಗಲು ಕಾರಣವಿಲ್ಲ. ಅದರಲ್ಲೂ ಹಸುರೆಲೆಗಳಲ್ಲಿ ವಿಟಮಿನುಗಳು ಹೆಚ್ಚು ಎಂದು ತಿಳಿದ ಬಳಿಕ ಅವರು ತಾವು ತಮ್ಮ ಕಾರ್ಖಾನೆಯಲ್ಲಿ ಕತ್ತರಿಸುವ ಎಲೆ ಅಡಿಕೆ ಸಂಖ್ಯೆಯನ್ನು ಇಮ್ಮಡಿಸಿದ್ದಾರೆ. ಅವರ ಬಾಯಿ ಯಾವಾಗ ನೋಡಿದರೂ, ಸಂಚಾರಕ್ಕೆ ಹೊರಟ ಪೀಕದಾನಿಯಂತೇ ಇರುತ್ತದೆ.

ಸಂಚಾರ ಎನ್ನುವಾಗ ಒಂದು ಮಾತು ನೆನಪಿಗೆ ಬರುತ್ತದೆ. ಅವರು ಸಂಚಾರ ಪ್ರಿಯರು—ಎಲ್ಲಿ ಯಾವ ಊರಲ್ಲಿ ಏನಾಗುತ್ತದೆ? ಯಾವ ಊರಿನಲ್ಲಿ ಏನಿದೆ ಎಂದು ತಿಳಿಯುವ ಕುತೂಹಲ ಬಹಳ. ಪ್ರತಿಯೊಂದು ಊರಲ್ಲೂ, ಪ್ರತಿಯೊಂದು ಏನೋ ಒಂದು ಹೆಚ್ಚಾಗಿಯೋ ಕಡಿಮೆಯಾಗಿಯೋ ಇರಬೇಕೆಂಬುವುದು ಅವರ ದೃಢಸಿದ್ಧಾಂತ. ಅದನ್ನು ತಿಳಿದು, ಬೇಗ ಚಲಿಸಲಾರದ ತಮ್ಮ ಶರೀರವನ್ನು ಏನಾದರೂ ಒಂದು ಗಾಡಿಯಲ್ಲಿ ತುಂಬಿಸಿಕೊಂಡು ಎಲ್ಲಿಗಾದರೂ ಸಂಚಾರಕ್ಕೆ ಹೋಗಿಯೇ ಹೋಗುತ್ತಾರೆ. ನನ್ನನ್ನು ನೋಡಿ ಅವರಿಗೆ ಅಸೂಯೆಯೂ ಇದೆ. ಕಾರಣ, ಅವರು ಸಂಚಾರಮಾಡುವ ದಿನಕ್ಕಿಂತ ನನ್ನ ವಿರಾಮದ ದಿನ ಕಡಿಮೆಯೆಂಬುದು. ನಾನು ಯಾವಾಗ ಸಿಕ್ಕಿದರೂ ಸರಿಯೆ ಎಲ್ಲಿ ಹೋಗಿದ್ದಿರಿ, ಎಲ್ಲಿ ಏನಾಯಿತು, ಎಲ್ಲಿ ಯಾರು ಇದ್ದರು, ಎಲ್ಲಿ ಏನು ವಿಶೇಷ ಎಂದು ಕೇಳುವರು. ಅದನ್ನು ಅವರ ಮುಂದೆ ಹೇಳಿದರೇನೆ ಅವರಿಗೆ ಸಂತೋಷ. ನಿಮಗೂ ಒಂದೆರಡು ಬೀಡಾ ಸಿಕ್ಕಿಯೇ ಸಿಗುತ್ತೆ ಅನ್ನಿ.

ನೀವು ಎಲಿ ಅಡಿಕೆ ಮೆಲ್ಲುವವರಲ್ಲವಾದರೆ ನಸ್ಯವಿದೆ. ಅವರ ನಸ್ಯದ ವಹಿವಾಟು ಸಹ ರಖಂವಾರಿಯೇ. ಬಾಯಿಗಿಂತ ಕಡಿಮೆಯಾಗದ ಮೂಗಿನ ಸೊಳ್ಳೆಗಳು ಅವರಿಗೆ. ಈ ದ್ವಂದ್ವಿಗಳಿಗೆ ಯಾರೂ ತಡೆಯಾಗದಂತೆ ಮೀಸೆ ತೆಗೆದುದರಿಂದ—ಮುದ್ದಾದ ಕೆಂದುಟಿಗಳ ಮೇಲೆ ಎರಗಿದ ಹದ್ದಿನಂತೆ ಕಾಣುವ ಆ ಎರಡು ಕವಾಕ್ಷಗಳಿವೆ.

ವಿಷಯಯನ್ನು ಬಿಟ್ಟು ಕಾವ್ಯಕ್ಕೆ ಸರಿದರಾಗದು. ರಾಮಯ್ಯನವರು ಬಡಸಂಸಾರಿಗರು. ಅವರ ಆತುರದ ಕೈ ಉದ್ದವಾದರೆ ಅನುಕೂಲದ ಕೈ ಗಿಡ್ಡ. ಹೀಗಾಗಿ - ದೇಶಸಂಚಾರದ ಎಲ್ಲಾ ಆಸೆ ಮುಗಿಯದು. ಇದ್ದ ಅನುಕೂಲತೆಯಲ್ಲೇ ವರ್ಷಕ್ಕೊಂದು ತಿಂಗಳು, ವಿರಹಿಗಳಾಗಿ, ಸಂಚಾರಕ್ಕೆ ಹೊರಡುತ್ತಾರೆ. ಗುರುತು ಪರಿಚಯವಿಲ್ಲದ ಯಾವ ಊರಿನಲ್ಲೂ ಬಾಳ್ವೆ ಮಾಡಬಲ್ಲ ವ್ಯಕ್ತಿ—ಪಾಂಡಿತ್ಯದಿಂದಲ್ಲ, ತಮ್ಮ ಸೌಜನ್ಯದಿಂದ. ಬರ್ಮಾದೇಶದ ಬುದ್ಧ ಸಂಚಾರಕ್ಕೆ ಹೊರಟ ಹಾಗೆ ಹೊರಟು ಬಿಡುತ್ತಾರೆ.

ಅವರ ಮನಸ್ಸು ನಾನಾವಿಧವಾದದ್ದು. ಅಲ್ಲಿ ಇಲ್ಲಿ ಇರುವ ಹಳೆ ಗುಡಿಗಳನ್ನು ಕಾಣಬೇಕು ಎಂದು ಒಂದೂರಿಗೆ ಹೋದರು. ನೋಡಿದರು—ಅವಸರದಿಂದಲ್ಲ; ಗುಡಿಯ ಪ್ರತಿಯೊಂದು ಕಂಭ, ಕಲ್ಲಿನ ಮುಂದೆಯೂ ಒಮ್ಮೊಮ್ಮೆ ಒಂದೊಂದು ಚಿಮಟಿ ನಸ್ಯವನ್ನು ಮೂಗಿಗೇರಿಸಿ ಸಂತೋಷ ಪಟ್ಟರು. ಆ ಚೀಟಿಗೆ ಪೂಜಾರಿಗಳನ್ನು ಕರೆದರು. ಅವರಿಗೆ ಪೂಜೆಯ ಆತುರ, ದಕ್ಷಿಣೆಯ ಆತುರ ಎರಡೂ ಇದ್ದರೂ ಅವರ ಮನಸ್ಸನ್ನು ಎರಡಕ್ಕೂ ನೆರವಾಗದೆ ಹಿಡಿದರು.

'ಸ್ವಾಮಿ ತಾವು ಈ ದೇಗುಲದ ಅರ್ಚಕರೇ' ಎಂದು ಬಹುವಚನ, ಮನ್ನಣೆ, ಇವುಗಳನ್ನು ಮುಂದೆಕಟ್ಟಿ ಮಾತನಾಡಿಸುತ್ತಾರೆ. ಪಾಪ—ಆ ನಯ ನುಡಿಗೆ ಮನಸೋತು, ಅವರು ಇವರಿಗೆ ಗುಡಿಯ ದಂತಕಥೆಗಳನ್ನೆಲ್ಲಾ ಕಂಠಪಾಠ ಒಪ್ಪಿಸುತ್ತಾರೆ. ಅವರಿಂದ ಎರಡು ಕಾಸು ಕೇಳುವ ಯೋಚನೆ ಇದ್ದವರು ಸಹ, ಮನೆಗೆ ಕರೆದು ಘುಕಟ್ ಊಟ ಹಾಕಿಸಿ ಕಳುಹಿಸಿಕೊಡುತ್ತಾರೆ.

ಗುಡಿಕಂಡರೆ ಸಾಲದು ಅವರಿಗೆ, ಅದರ ಚೆಲುವಿನ ಕೂಲಂಕಷ ಬೇಕು. ಅದನ್ನು ಕಟ್ಟಿದವರ ಕಥೆ ಬೇಕು, ಒಡೆದವರ ಇತಿಹಾಸ ಬೇಕು, ಅದನ್ನು ಕಟ್ಟದೆ ಹೋಗಿದ್ದರೆ ಏನಾಗುತ್ತಿತ್ತು ಎಂದು ಹೇಳಲೂ ಬೇಕು. ಗುಡಿ ಸಿಕ್ಕದೆ ಹೋದರೆ ಆ ಊರಿನ ಹಾಳು ಸ್ಮಶಾನದ ಬಳಿಯೋ, ಕೊಳಕು ಕೆರೆದಂಡೆಯಲ್ಲೋ ನಿಂತು ಸೃಷ್ಟಿಯ ಸೌಂದರ್ಯವನ್ನು ಸವಿಯುವರು. ಹೀಗೆ ಸೊಗಸನ್ನು ಸವಿಯುವ ಆತುರ ಬಹಳ.

ಅವರ ಈ ಎಲ್ಲಾ ಆತುರಗಳನ್ನು ನುಂಗುವಂತಹ ಪ್ರೇಮ ಅವರಿಗೆ ಸಂಗೀತದ ಮೇಲಿದೆ. ಪುತ್ತೂರಲ್ಲಿ ಪ್ರತಿವರ್ಷ ದಸರಾ ಉತ್ಸವ ನಡೆಯುತ್ತದಷ್ಟೆ. ನಡೆಯುವ ಆರುತಿಂಗಳಿಗೆ ಮೊದಲೇ ಅವರು ನನ್ನೊಡನೆ 'ಈ ವರುಷ ಯಾರು ಯಾರು ಬರುತ್ತಾರೆ?' ಎಂದು ಕೇಳುವರು. ಯಾರೂ ಇಲ್ಲವೆಂದರೆ ಮೂರ್ಛೆಯೇ ಬಂದೀತು. ಯಾರದ್ದಾದರೂ ಹೆಸರು ಹೇಳಿ ಅವರನ್ನು ಸಮಾಧಾನ ಪಡಿಸಬೇಕು. ಸರಿ—ದಸರಾ ಬಂದರೆ 'ಅವರು ಯಾವಾಗ ಬರುತ್ತಾರೆ' ಎಂದು ಮಕ್ಕಳಂತೆ ಪೀಡಿಸ ತೊಡಗುವರು. 'ಯಾರೂ ಇಲ್ಲ' ವೆಂದರೆ ಕೊಬ್ಬಿದ ಮೀನು ಒಣಗಿ ಹೋದಷ್ಟು ಸೊರಗಿ ಬಿಡುವರು.

ಬಂದಿದ್ದಾರೆ ಎಂದರಾದರೂ ಸುಖವಿದೆಯೇ? ಇಲ್ಲ- 'ಅವರು ಹೇಗೆ ಸ್ವಾಮಿ' ಎಂದು ಕೇಳುವರು. 'ಚೆನ್ನಾಗಿದ್ದಾರೆ' ಎಂದರೆ 'ಹಿಂದುಸ್ಥಾನಿಯೋ—ಕರ್ಣಾಟಕಿಯೋ' ಎನ್ನುವರು. 'ದಕ್ಷಿಣಾದಿ' ಎಂದರೆ 'ಹಿಂದುಸ್ಥಾನಿ ಗೊತ್ತಿಲ್ಲವೆ?' ಎಂದು ಕೇಳುವರು.

ನಾನೇ 'ಹಿಂದುಸ್ಥಾನಿ' ಎಂದರೆ 'ದಕ್ಷಿಣಾದಿ ಬಾರದೆ? ದಕ್ಷಿಣ ಪದ್ಧತಿ ತಿಳಿಯದೇ?' ಎನ್ನುವರು. ಅವರಿಗೆ ಎರಡರ ಸಪ್ಲೈಯೂ ಆಗಬೇಕು. ಸರಿ, ಅವರು ಬೈಟಕೀಗೆ ಬಂದರು. ಹಾಡುಗಳನ್ನು ಕೇಳಿದರು. ಚೆನ್ನಾಗಿರಲಿಲ್ಲವಾದರೆ 'ಏನು ಸ್ವಾಮಿ? ಸಂಗೀತ ಹ್ಯಾಗೆ?' ಎಂದು ಕೇಳಿದರೆ ಸಾಕು—ಕೈಯಲ್ಲಿ ಸತ್ತ ಮಗುವನ್ನು ಹಿಡಿದು ನಿಂತಂತೆ—'ಕೊಂದರು ಸ್ವಾಮಿ' ಎನ್ನುತ್ತಾರೆ. ಚೆನ್ನಾಗಿದ್ದರೂ ಕಷ್ಟ.

ಅವರಿಗೂ ಇವರಿಗೂ ಪರಿಚಯವಿಷ್ಟೇ ಅಲ್ಲ ದೋಸ್ತಿಯನ್ನು ಮಾಡಿ ಕೊಡಬೇಕು. ಅನಂತರ ಅವರಿಂದ ಹೇಗಾದರೂ ಮಾಡಿ ಹತ್ತು ಹತ್ತು ಹಾಡು ಕದ್ದಾರು. 'ಸ್ವಾಮಿ ಅವಕಾಶವಿಲ್ಲವೆಂದು ಕಾಣುತ್ತದೆ. ತಾವು ಒಳಗಿನಿಂದ ಸ್ನಾನಮಾಡುವಾಗ ಹಾಡುತ್ತಿದ್ದರೂ ಸಾಕು. ಹೊರಗಿನಿಂದಲೇ ಕೇಳುತ್ತೇನೆ. ಒಂದು ಶಹಾಂನ, ಒಂದು ಬೇಗಡೆ, ಒಂದು ಬಹಾರು, ಒಂದು ಮಾಲಕಂಸ, ಇಲ್ಲವೆ ಶ್ರೀರಂಜನಿ---ಇಷ್ಟು ತಿಳಿಸಿದರೆ ಸಾಕು.'

ಅವರ ರಾಗದ ತೃಪ್ತಿಯಾಗಲು ಇವರಿಗೆ ಸ್ನಾನ ೫ ತಾಸಿನ ಸ್ನಾನವಾಗಬೇಕು. ಇಷ್ಟು ಕೇಳಿದರೆ ಸಾಕೆ! ಹಾಡುಗಾರರ ಊರ ಬಳಿ ಹೋಗುವ ಅವಕಾಶವಿದ್ದರೆ, ಅವರ ಮನೆಗೆ ಹೊಕ್ಕು, ಅಲ್ಲೇ ನಿಂತು, ಅವರನ್ನು ಹಾಡಿಸಿ ತೃಪ್ತಿಪಡುತ್ತಿದ್ದರು. ಊರಿಗೊಬ್ಬರು ಹಾಡುಗಾರರು ಬಂದರೆಂದರೆ ರಾಯರಿಗೆ ಆಗ ಉಪವಾಸವೆಂಬುದು ನಿಶ್ಚಯದ ಮಾತು. ಸ್ವತಃ ಅವರೂ ಹಾಡುಗಾರರೇ. ಇಂಪಾದ ಸ್ವರವಿದೆ. ಆದರೆ---ಪೀಕದಾನಿ ಬಾಯಿ ತೆರೆದರೆ ಆ ಕೆಂಬಣ್ಣ ಕಂಡು, ಇದೇ 'ಲಂಕಾಪುರಿ' ರಾಗ ಹಾಡುತ್ತಾರೆ ಎನ್ನಬೇಕು.

ನಮ್ಮ ನಾಟಕಗಳಲ್ಲಿ ಒಂದೆರಡು ಬಾರಿ ಪಾರ್ಟು ಮಾಡಿದ್ದಾರೆ ಅವರು. ಅವರನ್ನು ಬೆದರಿಸಲು ಒಂದೇ ಉಪಾಯ. ಸಾಲಗಾರರು ಬರುತ್ತಾರೆ ಎಂದರೂ ಹೆದರುವ ಜೀವವಲ್ಲ. ಆದರೆ 'ನಾಳೆ ನಿಮ್ಮ ನಾಟಕದ ಪಾರ್ಟು ಇದೆ' ಎಂದು ಬಿಟ್ಟರೆ ಸರಿ ತೊಡಗಿತು ಅವರ ಚಿಂತೆ. ಆ ನಾಳೆ ಸರಿಯುವ ತನಕ, ಅಯ್ಯೋ ಅವರ ಬುದ್ಧಿಯ ಅಳಕು ಹೇಳತೀರದು.

ಒಮ್ಮೆ ನಾವು ಕೆಲವರು ಅವರನ್ನು ಕೂಡಿ, ದೂರದ ಸಂಚಾರಕ್ಕೆ ಹೋಗಿದ್ದೆವು. ರೈಲುಗಾಡಿಯಲ್ಲಿ ಎರಡು ದಿವಸದ ಹಾದಿಯಿತ್ತು. ಹಾದಿಯೆಲ್ಲಾ ಬೆಂಗಾಡಾಗಿತ್ತು. ಬಂಡಿಯೆಲ್ಲ ಕಿಕ್ಕಿರಿದಿತ್ತು. ಕಾಲು ಬಿಡುವುದಕ್ಕೂ ಅವಕಾಶವಿರಲಿಲ್ಲ. ನಾವೆಲ್ಲ ಒಳಗೆ ಕುಳಿತಲ್ಲಿಯೇ ನಿದ್ರಿಸುತ್ತಿದ್ದೇವೆ. ಆದರೆ ರಾಮಯ್ಯನವರು ರಸವತ್ತಾಗಿ ತಾಂಬೂಲ ಸೇವಿಸುವರು; ನನ್ನನ್ನು ಮಾತನಾಡಿಸುವರು; ತಮಗೆ ನಿದ್ರೆ ಬಂದರೆ ನಸ್ಯಸೇವನೆ

ಯಿಂದ ಪ್ರಜ್ಞಾಭರಿತರಾಗಿ ಎಚ್ಚತ್ತು ಪುನಃ ಮಾತನಾಡಿಸುವರು. ಯಾರೂ ಮಾತನಾಡದೆ ಹೋದರೆ ಅಲ್ಲಿಂದ ಏಳುವರು; ಇನ್ನೊಂದು ಡಬ್ಬಿಗೆ ಹೋಗುವರು;—ಅದು ಮತ್ತೂ ಕಿಕ್ಕಿರಿದ ಡಬ್ಬಿ—ಯಾವನನ್ನಾದರೂ ಪ್ರೇರಿಸಿ, ಅವನ ಹೆಮ್ಮೆಯನ್ನು ಉಬ್ಬಿಸಿ, ಅವನ ತೊಡೆಯ ಮೇಲೆಯೇ ಜಾಗವನ್ನು ಗಳಿಸಿ, ಮಾತನಾಡ ತೊಡಗಿದರು. ಅವನಾರೋ, ಇವನಾರೋ—ಪರಸ್ಪರ ಸಂಬಂಧವಿರುವ ವಿಷಯವಾವುದೊ! ಆದರೆ ಅವರೊಳಗೆ ಗಹನವಿಷಯ ಚರ್ಚೆಗೆ ಕಡಿಮೆಯಿಲ್ಲ. ಮಾತಿನ ರೀತಿ ಕಂಡರೆ ಅರವತ್ತು ವರ್ಷ ಅವಳಿಜವಳಿಯಾಗಿ ಬೆಳೆದ ಮಕ್ಕಳಂತೆ ಕಾಣಬೇಕು. ಆ ಜಿಪ್ಪನೇನಾದರೂ 'ನಮ್ಮೂರಲ್ಲಿ ಹೈದ್ರಲ್ಲಿ ಕಟ್ಟಿದ ಹಾಳು ಗುಡಿಯಿದೆ' ಎಂದರೆ ತೀರಿತು. 'ಹೈದ್ರಲ್ಲಿ ಗುಡಿಕಟ್ಟಿದಾಗಲೇ ಅದು ಹಾಳಾಗಿತ್ತೆ? ಹಾಳಾದಮೇಲೆ ಅದನ್ನು ಕಟ್ಟಿದನೆ? ತಾನು ಹಾಳಾದ ಮೇಲೆ ಅದನ್ನು ಕಟ್ಟಿದನೇ? ಅದು ಹಾಳಾದಮೇಲೆ ತಾನು ಕಟ್ಟಿದನೆ? ಎಂಬ ಎಲ್ಲಾ ಕೂಲಂಕಷ ತಿಳಿದು ಮುಂದಿನ ವರುಷ ಖಂಡಿತವಾಗಿ ಅಲ್ಲಿಗೆ ಹೋಗಿ ಆ ಗುಡಿಯನ್ನು ನೋಡಿ ಬರುತ್ತಾರೆ. ಗುಡಿಯು ಅಲ್ಲಿ ಇಲ್ಲವಾದರೆ, ಪ್ರಾಯಶಃ ಈ ಒಂದು ವರ್ಷದಲ್ಲಿ ಸಂಪೂರ್ಣ ಹಾಳಾಯಿತೇನೋ ಎಂದು ಸಮಾಧಾನ ತಂದು ಕೊಂಡಾರು.

ಅವರಿಗೆ ಮನುಷ್ಯರೇ ಗೆಳೆಯರು, ಅವರೊಡನೆಯೇ ಮಾತನಾಡಬೇಕೆಂದು ಅವಶ್ಯವಿಲ್ಲ. ಹಿಂದೆ ಹೇಳಿದ ಪ್ರಯಾಣಕಾಲದಲ್ಲಿ—ಮನುಷ್ಯರು ಮಾತ್ರರಲ್ಲ, ಬರೇ ಅವರ ಛಾಯೆ ಇದ್ದವರೊಡನೆಯೇ ಮಾತನಾಡಿದ್ದುಂಟು. ಅಂಥವರೂ ಸಿಗದಿದ್ದರೆ, ಸರ್ವೆಕಲ್ಲಿಗೋ ಕಂಭಕ್ಕೋ ಪ್ರಾಣಪ್ರತಿಷ್ಠೆಮಾಡಿ ಅದರ ಅಂತರಂಗವನ್ನು ಇಣಿಕಿ ನೋಡಲು ಯತ್ನಿಸಿದ್ದುಂಟು.

ರಾಮಯ್ಯನವರ ಗುಂಡಾದ ದೇಹದಲ್ಲಿ, ಅಷ್ಟು ನಯವಾದ ಮೈಯುಳ್ಳ ಮನಸ್ಸಿದೆ. ಮೃದುವಾದ ಆತ್ಮವಿದೆ. ಆ ಜೀವನದ ವಿಷಯವಾಗಿ ನನಗೊಂದೇ ಬೇಸರ. ಎಲ್ಲಾದರೂ ಒಂದು ವೀಣೆಯ ಬುರುಡೆಯಾಗಿ ಹುಟ್ಟಬೇಕಾದ ಆ ಜೀವವು ಎಲ್ಲೆಲ್ಲೋ ಕಾಡುಹಳ್ಳಿಯ ಮನುಷ್ಯಬಳಗದಲ್ಲಿ ಹುಟ್ಟಿ ಅಲ್ಲೇ ಪಳಗಿತಲ್ಲಾ ಎಂದು.



# ಸುಧಾರಣೆಯ ಸದಾಶಿವಯ್ಯ

ನಿಶ್ಚಯಕ್ಕೂ ಸದಾಶಿವಯ್ಯನವರ ಸುಧಾರಣೆಗೆ ಸಿಲುಕದ ವಿಷಯ ಯಾವುದೂ ಇಲ್ಲ. ಗ್ರಾಮ ಸೇವೆ, ಕಲಾ ಸೇವೆ, ಸಾಹಿತ್ಯ ಸೇವೆ ಇವು ಅವರ ಇಷ್ಟದ ವಿಷಯಗಳು. ಶಿಕ್ಷಣ, ಭಾಷಣಗಳಲ್ಲಿಯೂ ಅವರ ಮಾಹಿತೆಯು ತುಂಬಾ ಇದೆ. ಮುಖ್ಯವಾಗಿ ನಾಡಿನ ಜೀವನದಲ್ಲಿ ಗಣ್ಯಸ್ಥಾನವು ತಮ್ಮದೆಂದು ಅವರು ತಿಳಿದಿದ್ದಾರೆ. ನಾವೂ ಹಾಗೆ ತಿಳಿಯದಿದ್ದರೆ ಅದು ನಮ್ಮ ತಪ್ಪು. ನನಗೆ ಅವರ ಪರಿಚಯವು ಬಹಳ ಹಿಂದಿನಿಂದಲೂ ಇದೆ. ಈಗಲೂ ಇರುವಂಥ ಗೆಳೆತನವು ನಮ್ಮದು. ಆಗಾಗ ಅವರ ಬಳಿಗೆ ಹೋಗಿ ಬರುತ್ತಿದ್ದು, ಅವರನ್ನೂ ಅಟ್ಟಕ್ಕೇರಿಸಿದರೆ ಆಯಿತು—ಅವರಿಗೆ ಖುಶಿ. ಅವರಿಂದಾಗುವ ಎಷ್ಟೋ ಕೆಲಸಗಳನ್ನು ನಿಮಗಾಗಿ ಹೇಗಾದರೂ ಮಾಡಬೇಕೆನ್ನುವ ಜನ ಅವರು. ಅದಕ್ಕಾಗಿ ಎಷ್ಟೋ ಬಾರಿ ಅತಿ ಹೆಚ್ಚಿನ ತ್ಯಾಗವನ್ನೂ ಮಾಡಬಲ್ಲರು.

ಆದರೆ ಒಂದು ದುರ್ದೈವ—ಅವರು ಏನಾದರೂ ಮಾಡಲು ಹೋದರೆ ಅದು ಮತ್ತೇನಾದರೂ ಆಗುವ ಸಂಭವವಿದೆ. ಆ ಭೀತಿ ಅವರಿಗಿಲ್ಲ—ಅದು ನಮಗೆ ಮಾತ್ರ. ಮುಖ್ಯ ವಿನಾಯಕನನ್ನು ಬಿಡಿಸಲು ಹೋಗಿ, ಹನುಮಂತನ ಸೃಷ್ಟಿಮಾಡುವ ಧೋರಣೆ ಅವರದು. 'ಏನು ಸ್ವಾಮಿ ಹನುಮಂತನನ್ನು ಏಕೆ ಮಾಡಿದಿರಿ? ನಮಗೆ ವಿನಾಯಕನ ಮೂರ್ತಿ ಬೇಕಿತ್ತು' ಎಂದರೆ ಕೆಟ್ಟಿರಿ ನೀವು. ಅವರು ಸಿಟ್ಟಾಗಲೂ ಬಹುದು. ಸಿಟ್ಟು ಅವರ ಜೀವನದಲ್ಲಿ ಉಸಿರಾಡಿಸಿದಂತೆ. ಆದರೆ ಬಲು ಆಳದ ಸಿಟ್ಟಲ್ಲ. ಅವರು ಶಾಂತವಾಗಿರುವಾಗ ನೀವು ಪ್ರಶ್ನೆ ಕೇಳಿದರೆ, ಇಲ್ಲವೆ ಪ್ರಶ್ನೆ ಕೇಳಿದಮೇಲೂ ಅವರು ಶಾಂತವಾಗಿದ್ದರೆ ಆಗ ಬರುವ ಉತ್ತರ ಇಂಥದು. 'ಸ್ವಾಮಿ ವಿನಾಯಕನಿಂದ ಏನು ಪ್ರಯೋಜನ? ಆ ಕಾಲಕ್ಕೆ ಅವನು ಸರಿಯೇ. ಬರೇ ತಿಂಡಿ ತಿನ್ನುವ ಜನ ಅವನು.

ನಿಮಗೆ ಕೆಲಸವಾಗ ಬೇಕಾದರೆ ಹನುಮಂತನೇ ಬೇಕು. ಅದಕ್ಕಾಗಿ ವಿನಾಯಕನನ್ನು ಸುಧಾರಿಸಿ ಹನುಮಂತನನ್ನು ಮಾಡಿದೆ' ಎಂದು.

ಮುಖ್ಯವಾಗಿ ಎಲ್ಲ ವಸ್ತುಗಳನ್ನು ಸುಧಾರಿಸಿ ಬಿಡುವುದು ಅವರ ರೂಢಿ. ಸುಧಾರಣೆಯಿಲ್ಲದೆ ಯಾವ ವಸ್ತುವೂ ಇರಬಾರದು ಎಂಬದು ಅವರ ಮಂತ್ರ. 'ಸುಧಾರಣೆ' ಎಂದರೆ ಅವರ ಅರ್ಥ ಇಷ್ಟಿರಬೇಕು--'ಇದ್ದ ರೂಪದಲ್ಲಿ ಒಂದು ವಸ್ತುವನ್ನು ಇರಗೂಡಿಸದಿರುವುದು' ಎಂದು.

ಒಂದಿನಿಂದ ಅವರಿಗೆ ಸಾಹಿತ್ಯದಲ್ಲಿ ಅಭಿರುಚಿ. ಚಿಕ್ಕ ಕಥೆ, ನಾವೆಲು, ನಾಟಕ, ಕವಿತೆ, ಉಪನ್ಯಾಸ, ವಿಮರ್ಶೆ ಇಂಥ ವಿಷಯಗಳಲ್ಲಿ ಅವರ ಆತುರ ಬಹಳ. ನಾನು ಹೋದಾಗಲೆಲ್ಲ ಈ ಒಂದೊಂದು ವಿಷಯ ಮಾತನಾಡುತ್ತಿರುತ್ತಾರೆ. ಸಾರ್ವಜನಿಕ ಸಭೆಗಳಲ್ಲಿ ಅನೇಕವರಲ್ಲಿ ಅವರು ಇವೇ ವಿಷಯಗಳನ್ನು ಮಾತನಾಡುವರು.

ಒಮ್ಮೆ ಹೋದಾಗ 'ಸ್ವಾಮಿ, ನೀವು 'ಒಪಹೇಮನ' ಎಂಬ ಪುಸ್ತಕವನ್ನು ನೋಡಿಲ್ಲವೇ?' ಎಂದರು. 'ನಾನು ಯಾವುದು?' ಎಂದೆ. 'ಅ--ಇದು. ಅಂದರೆ ಅದರಲ್ಲಿ ಪ್ಲಾಟು--ಪ್ರಸಂಗ ಎಲ್ಲ ಬಲು ಚೆನ್ನಾಗಿದೆ. ಆದರೆ ಕಾನಂಡೈಲನಿಗಿಂತಲೂ ಅವನು ಪ್ರವೀಣ. ಅಂದರೆ ಒಂದು ವಿಷಯದಲ್ಲಿ ಯಾಕೋ ತಪ್ಪಿದ ಹಾಗಿದೆ. ಆದರೂ ಈ ಕಥೆಯನ್ನು ತುಸು ಸುಧಾರಿಸಿದರೆ ಕನ್ನಡಕ್ಕೆ ಚೆನ್ನಾಗಿ ಆದೀತು' ಎಂದರು. 'ಆಗಲಿ' ಎಂದೆ.

ಇನ್ನೊಮ್ಮೆ ಭೇಟಿಯಾಯಿತು--'ಇವರೇ ನೀವು ಇಬ್ಸೆನನ ಅಲ್ಲ ಮಾಲಿಯರನ ಡೆಮೇಜಡ್ ಗೂಡ್ಸ್ ನೋಡಿಲ್ಲವೆ? ಅದು ಮಾರಿ ಕೊರಿಲಿಯ ಈ ಪುಸ್ತಕಕ್ಕಿಂತ ಚೆನ್ನಾಗಿದೆ. ನೋಡಿ ಅದು ಬಲುದೊಡ್ಡ ಗ್ರಂಥ. ಅದನ್ನು ಸುಧಾರಿಸಿ ಕನ್ನಡದಲ್ಲಿ ಬರೆಯಬೇಕು' ಎಂದರು.

ಮಗದೊಮ್ಮೆ ಭೇಟಿಯಾಯಿತು. ಆಗ ಎಂದರು 'ನನಗೆ ಪುಟ್ಟಪ್ಪನವರ ಆ ಕವಿತೆ ನೋಡಿ ಮನಸ್ಸಿಗೆ ಬಂದಿತು. ಯಾಕೆ ಶ್ರೀಕಂಠಯ್ಯನವರ ಈ ಕವಿತೆಗಿಂತಲೂ ಅದು ಚೆನ್ನಾಗಿದೆ. ಆದರೆ ಶ್ರೀಕಂಠಯ್ಯನವ

ರಾಗಲಿ ಪುಟ್ಟಪ್ಪನವರಾಗಲಿ ಇವನ್ನು ಸುಧಾರಿಸಿ ಬರೆದಿದ್ದರೆ ಚೆನ್ನಾಗಿತ್ತು. ನೋಡಿ ಶರ್ಲಾಕ್ ಹೋಮ್ಸಿನಲ್ಲಿ ಇಂಥಾದೇ ಒಂದು ಪ್ರಸಂಗ ವಿದೆ. ಅದು ಸುಧಾರಿಸಿ ಬರೆದರೆ ಎಷ್ಟು ಲಾಯಕಾದೀತು' ಎಂದರು.

ಒಂದು ದಿನ ನಾನು ಧೈರ್ಯ ತಾಳಿ 'ಅಲ್ಲ, ನೀವೇಕೆ ಬರೆಯುವುದಿಲ್ಲ' ಎಂದೆ. ಅವರು 'ಯಾಕೆ, ನಿಮಗೆ ಗೊತ್ತೇ ಇಲ್ಲವೆ? ನಾನು ಗಾರ್ವಿಸು, ಡಿಕೆನ್ಸು, ಬನಿಯನು, ಇವರದ್ದೆಲ್ಲಾ ಸ್ವಲ್ಪ ಸ್ವಲ್ಪ ತೆಗೆದು ಸುಧಾರಿಸಿ ಇಲ್ಲಿಗೆ ತಕ್ಕಂತೆ ಮಾಡಿ ನಾಲ್ಕಾರು ಪುಸ್ತಕ ಬರೆದಿರಿಸಿದ್ದೇನೆ. ಆದರೂ ನೋಡಿ, ಪೂರ್ಣ ಮುಗಿಸಲಿಕ್ಕೆ ಆಗಲಿಲ್ಲ' ಎಂದರು.

'ಛೇ ನಿಮ್ಮಂಥವರು ಕೆಲಸ ಮಾಡದಿದ್ದರೆ ಮತ್ತಾರು ಹಾಗೆ ಮಾಡಬೇಕು' ಎಂದೆ. ಪ್ರಸನ್ನವದನರಾದರು. ಒಂದು ರಿಂಜನ್ ಕಾಫಿ ಬಂದಿತು. ಅದನ್ನು ಕುಡಿದಮೇಲೆ ನನ್ನೆದುರಿಗೆ ಅಡಂಗಳದಷ್ಟು ದೊಡ್ಡ ಒಂದು ಪುಸ್ತಕವನ್ನು ತಂದಿರಿಸಿದರು. 'ಇದು ಮಾಂಟಿಧೂಮನ ಸುಧಾರಣೆ. ಇಲ್ಲಿ ಪ್ರಥಮ ಭಾಗವಿದೆ. ನೋಡಿ ಮೆಕ್ಸಿಕೋ ಜನರು, ಆ ಸಂಸ್ಕೃತಿ ಆಜಗಳ—ನಮ್ಮಲ್ಲಿಗೆ ಬ್ರಿಟೀಶರು ಇಲ್ಲವೆ ಮುಸಲ್ಮಾನರು ಇಲ್ಲವೆ ಆರ್ಯರು ಬಂದ ಕಾಲದಲ್ಲಿದ್ದಂತಿದೆ. ಅದನ್ನು ಇದಕ್ಕೆ ಹೋಲಿಸಿ ಬರೆದಿದ್ದೇನೆ' ಎಂದರು.

ಗ್ರಂಥ ಹೊತ್ತು ಮನೆಗೆ ತಂದೆ. ಆ ಅರ್ಧಟನ್ ತೂಕದ ಪುಸ್ತಕವನ್ನು ಓದುತ್ತ ಕುಳಿತರೆ ನಾನು ಬಚಾವಾದೇನೆಯೆ? ನನಗೂ ಸೊಕ್ಕು-ನನ್ನಂಥ ಮಹಾಸಾಹಿತಿ ಇನ್ನೊಬ್ಬನ ಬುಕ್ಕು ಓದುತ್ತ ಬಿದ್ದಿರುವುದೇ? ನನ್ನದನ್ನು ಒದಲು ನನಗೆ ಪುರಸತ್ತೂ ಇಲ್ಲ. ಆದರೂ ಆ ಧೊರೆಸಿಕ್ಕಿದಾಗ 'ಹೇಗಿದೆ ನನ್ನ ಮಾಂಟಿಧೂಮ?' ಎಂದರೆ ಏನು ಮಾಡಲಿ ಎಂದು ಓದಿದೆ. ಚೇಷ್ಟೆ ಕಂಡಿತು. ಹಟ ಹಿಡಿದು ಮುಗಿಸಿದೆ. ರೋಲಾಂಡನ ಜೀನ ಕ್ರಿಸ್ತಾಫರನನ್ನು ಓದಿದಷ್ಟು ಭಕ್ತಿಯಿಂದ ಓದಿ ಮುಗಿಸಿರಬೇಕು. ಅಂದರೆ ಮುಗಿಸಿದಾಗ ನನಗೆ ಮೈಮೇಲೆ ಎಚ್ಚರವಿರಲಿಲ್ಲ. ನಾಲ್ಕಾರು

ಸ್ನೇಹಿತರು ತಲೆಗೆ ತಂಡಿ ಬಟ್ಟೆಯಿಟ್ಟು ಗಾಳಿ ಹಾಕಿ ನನ್ನನ್ನು ಚೇತನಗೊಳಿಸುತ್ತಿದ್ದರು.

ಮಾಂಟಿಧೂಮನ ಸುದಾರಣೆ ಕಂಡು ದಿಗಿಲುಗೊಂಡೆ. ಕಥೆಯಲ್ಲಿ ಮಾಂಟಿಧೂಮನೂ ಇಲ್ಲ, ಅವನನ್ನು ಬರೆದವನೂ ಇಲ್ಲ, ಬರೇ ಸುಧಾರಣೆ, ದೇಶಸೇವೆ, ಭಾಷಾಸೇವೆ—ನಡುನಡುವೆ ಇಂದಿನ ಫಿರಂಗಿ, ನಾಳಿನ ಬೆಕ್ಟೀರಿಯಾ, ನಿನ್ನೆಯ ವಿದ್ಯುತ್ ಲಾಂದ್ರ, ಮೊನ್ನೆಯ ಬಾಣಬಿಲ್ಲು ಎಲ್ಲ ಕೈ ಹಿಡಿದು ಚಲಿಸುತ್ತಿದ್ದವು. ಅಹಮ್ಮದಸಿಂಗನ ಮಗ ಅನಿಲ ಫರ್ನಾಂಡಿಸನು ಕಥಾ ನಾಯಕನು (ಹಿಂದು ಕ್ರೈಸ್ತ ಮುಸಲ್ಮಾನ ಐಕ್ಯ) ಅವನ ಸಾಹಸ, ಅವನು ಯಾಮಿನಿಗಾಗಿ ಹೋರಾಡಿ ಆತ್ಮಹತ್ಯೆಯನ್ನು ಮಾಡಿದ ರೀತಿಯನ್ನೂ ಮಾಂಟಿಧೂಮನು ಸ್ಪೇನಿಷ್ ಜನರ ಮೇಲೆ ಕಾದಿದ ಬಗೆಗೆ ಹೋಲಿಸಿ ಅವನನ್ನೂ ಕೊಂದಿದ್ದರು—ಅಲ್ಲ ಕೊಂದಂತೆ ಬರೆದಿದ್ದರು.

ನಾನು ಹೋದಾಗಲೆಲ್ಲ 'ಹೇಗಿದೆ?' ಎಂದು ಕೇಳುವರು. ನಾನು 'ಇನ್ನೇನೋ ಪುಸ್ತಕವಿದೆಯಂತಲ್ಲ' ಎಂದು ಬೇರೆ ವಿಷಯಕ್ಕೆ ಹಾರುತ್ತಿದ್ದೆ. ಪ್ರತಿ ಪ್ರಸಂಗದಲ್ಲೂ ಅವರ ಕಲಾರೀತಿ, ಕಲ್ಪನಾತೀತವಾದ ಸುಧಾರಣೆಯಿಂದ ಮೂಲ ಗ್ರಂಥಕರ್ತರೇ ಹತವಾಗಿರಲು ನನ್ನಂಥ ಬಡಪಾಯಿಯ ಗತಿಯೇನು?'

ಅವರ ಸುಧಾರಣೆಯ ಬುದ್ಧಿಯ ವಿಷಯ ಇನ್ನೊಂದು ಸಂಗತಿ ಹೇಳಿ ಮುಗಿಸಿ ಬಿಡುತ್ತೇನೆ. ಅವರಿಗೆ ಈಗಿನ ಸಾಹಿತಿಗಳ ಮೇಲೆ ಪ್ರೇಮ. ಸತ್ತ ಹೆಗ್ಗಣದ ಮುಂದೆ ಮೂಗುಮುಚ್ಚುವಂತೆ ನಿಲ್ಲುವ ಪಂಡಿತ ಜನರನ್ನು ಕಂಡರೆ, ರೇಗಿ ಬಿಡುತ್ತಾರೆ. ಜನರಲ್ಲಿ ಅದರಲ್ಲೂ ಈ ಪಂಡಿತರಲ್ಲಿ ಆಧುನಿಕ ಸಾಹಿತ್ಯದ ಕಡೆಗೆ ಇರುವ ತಿರಸ್ಕಾರ ಹೋಗಲಾಡಿಸಬೇಕೆಂದು ಅವರದು ಬಹಳ ಪ್ರಯತ್ನ. ಎಷ್ಟೋ ಬಾರಿ ಇದಕ್ಕೆ ಭಾರಿ ಪ್ರಯತ್ನ ಪಟ್ಟಿದ್ದಾರೆ. ಅದಕ್ಕಾಗಿ ಕವಿತಾ ವಾಚನ, ವಿಮರ್ಶೆ, ಉಪನ್ಯಾಸಮಾಡಿರುತ್ತಾರೆ. ಒಂದು ಸಭೆಯಲ್ಲಿ ಅವರ ರಸಿಕತೆಗೆ ಮೆಚ್ಚಿ—ಸಭೆಯಿಂದ ಆರೆ

ವಾಶಿ ಜನರು ಅಂತರ್ಧಾನವಾದರು. ಕಾಲುವಾಶಿ ಜನರು ಸ್ವಪ್ನದಲ್ಲಿ ತೇಲಿದ್ದರು. ಉಳಿದವರು ಉಪನ್ಯಾಸ ಮುಗಿಯುತ್ತಲೇ ಪನಲಾಕ್ ಆಸ್ಪತ್ರೆಗೇನೇ ನಡೆದು ಬಿಟ್ಟರು. ಕೋಣನ ಮುಂದೆ ವೀಣೆ ಬಾರಿಸಿ ದಂತೆ ನಮ್ಮ ಜನರಿಗಾಗಿ ಏನು ಮಾಡಿದರೇನು?

ನಮ್ಮ ಜನ ಎಂದರೆ--ಬದುಕಿರುವಾಗ ಸುಮ್ಮನಿದ್ದೂ ಸತ್ತ ಮೇಲೆ ಗೋಳಿಡುವವರು. ಸದಾಶಿವಯ್ಯನಂಥವರು ಅಗ್ಗಕ್ಕೆ ಸಂತೆಯಲ್ಲಿ ಸಿಗುವ ಜನರೇ! ಅವರಿರುವ ಕಾಲಕ್ಕೆ ಅವರನ್ನು ಕಂಡು ತಾವಿಷ್ಟು ಸುಧಾರಣೆ ಹೊಂದದೆ ಹೋದರೆ ನಮ್ಮ ಜನರಿಗೆ ಸ್ವರಾಜ್ಯ ಸಿಗುವುದು ಹೇಗೆ?





# ವಿಲೆವಾರಿ ವಾಸುದೇವಯ್ಯ

ವಾಸುದೇವಯ್ಯನ ಹೆಸರು ತಿಳಿಯದವರಿಲ್ಲ. ನಮ್ಮ ಊರಿನಲ್ಲಿ ಅವನೆಂದರೆ ಸರ್ಪ ಕಲ್ಲಿನಿಂದ ತೊಡಗಿ, ಹೊಲೆಯನ ಗುಡಿಸಲಿನ ತನಕವು ತಿಳಿದಿದೆ. ಅವನನ್ನು ಒಬ್ಬೊಬ್ಬರು ಒಂದೊಂದು ರೀತಿಯಿಂದ ಕಾಣು ವರು. ತೀರ ಬಡವರ ಕಣ್ಣಿಗೆ ಅವನೊಂದು ತರವಾಗಿ ಕಾಣುವನು. ಅವನ ಶೋಕಿನ ಉಡುಗೆ, ಶಿಲ್ಕಿನ ಶರ್ಟು, ಕ್ರಾಪಿನ ತಲೆ, ಕೈಯ ಬೆತ್ತ— ಕಂಡರೆ ಅವನು ಅಸಾಮಾನ್ಯ ಶ್ರೀಮಂತನಿರಬೇಕು ಎಂದು ಕಾಣಿಸುವುದು. ಎಷ್ಟೋ ಸಾರಿ ಅವನು ದೊರೆಯ ಹಾಗೆ ಅರ್ಧ ಇಜಾರು, ಅರ್ಧ ಶರ್ಟು, ಇಡೀಮರಿಗೆ ಟೋಪಿ ಹಾಕಿ, ಗದ್ದೆ ಅಂಚಿನಲ್ಲಿ ನಿಂತು, ಕೂಲಿಗಳಿಂದ ಕರೆ ಮಣ್ಣನ್ನು ಅಗೆಯಿಸುವುದನ್ನೂ, ಕಾಡಿನಿಂದ ಕಟ್ಟಿಗೆ ತೆಗೆಯಿಸುವು ದನ್ನೂ ಕಂಡರೆ ಅವನು ಆಫೀಸರನೆಂಬುದು ನಿಶ್ಚಯ. ನಮ್ಮ ಹಳ್ಳಿಯ ವರಿಗೆಲ್ಲಾ ಅವನಾರೆಂದು ತಿಳಿದಿದ್ದರೂ, ನೆರೆಹಳ್ಳಿಯವರಿಗೆ ಅವನ ವಿಷಯ ತಿಳಿಯದು. ಕೆಲವರು ಅವನನ್ನು ಅಬಕಾರಿ ಆಫೀಸರನೆಂದು ತಿಳಿದಿದ್ದಾರೆ. ಇನ್ನು ಕೆಲವರ ಪಾಲಿಗೆ ಅವನು ಫಾರೆಸ್ಟ್ ಆಫೀಸರನು.

ಸ್ವಂತ ಊರಿನಲ್ಲೇ ಅವನ ಅವತಾರ ನೂರು, ಉದ್ಯೋಗ ಸಾವಿರ. ಶ್ರೀಮಂತರು ಯಾರಾದರೂ ಹೊರಗೆ ಹೋಗುವುದಾದರೆ ವಾಸುದೇವಯ್ಯ ನನ್ನು ಬಿಟ್ಟು ಹೋಗುವಹಾಗಿಲ್ಲ. ನಾಟಕ ಕಂಪೆನಿಯವರು ಊರಿಗೆ ಬಂದರೆ ವಾಸುದೇವಯ್ಯ ಇಲ್ಲದೆ ಕಳೆಯದು. ರಜಾ ಸಮಯಕ್ಕೆ ಊರಿಗೆ ವಕೀಲರು ಬಂದರೆ, ಕಲೆಕ್ಟರರು—(ಅದರ ಕೆಳಗಿನ ತರಗತಿಯವರಲ್ಲ) ಬಂದರೆ ಅವನೇ ಬರಬೇಕು. ಎಂಥಾ ಇಂಗ್ಲೀಷು ಕಲೆಕ್ಟರರಾದರೂ ಸರಿಯೇ—ಊರಿಗೆ ಬಂದರೆ ಸಾಕು ವಾಸುದೇವಯ್ಯನು, ಮೊದಲನೆ ಮುಹೂರ್ತಕ್ಕೇನೆ, ಒಂದು ನಿಂಬೆಹಣ್ಣು ಹಿಡಿದು ಅವರನ್ನು ಇಂಗ್ಲೀಷಿ ನಲ್ಲಿ ಮಾತನಾಡಿಸಿ ದೋಸ್ತಿ ಸಹ ಮಾಡಿಕೊಳ್ಳುತ್ತಾನೆ. ಮುಂದೆ ಅವರು

ತಮ್ಮ ಊರಿಗೆ ಸರ್ಕೀಟಿಗೆ ಬರುವುದಿದ್ದರೆ ಸಾಕು ವಾಸುದೇವಯ್ಯನನ್ನು ತಾವಾಗಿ ಹೇಳಿ ಕಳಿಸುತ್ತಾರೆ. ಅಂಥ ಜನ ವಾಸುದೇವಯ್ಯ ಎಂದರೆ. ಊರಿನ ಎಲ್ಲರೂ ಅವನನ್ನು ಹಾಗೆಯೆ ನೋಡುತ್ತಾರೆ. ಅವನನ್ನು ಕಂಡು ಅಸೂಯೆ ಪಡುವವರೂ ಸಹ--ಅವನ ಮೇಲೆ ಕತ್ತಿ ಎತ್ತಲು ಸಿದ್ಧರಿಲ್ಲ. ಎಲ್ಲಾದರೂ ಮುಲಾಮತಿ ಮಾಡಿ ಹಾಕಿಯಾನಲ್ಲಾ, ಕಲೆಕ್ಟರರ ಕಿವಿ ಚುಚ್ಚಿಯಾನಲ್ಲಾ ಎಂದು ಅಂಜಿಕೆ.

ನಿಜಕ್ಕೂ ಕೇಳುತ್ತೀರಾ - ವಾಸುದೇವಯ್ಯ ಅಪಾಯಕರ ಜೀವಿಯೇ ಅಲ್ಲ. ಅವನನ್ನು ಲಕ್ಷ್ಮೀ ಚೇಳಿಗೂ ಹೋಲಿಸಲು ಸಾಧ್ಯವಿಲ್ಲ. ತುಂಬಾ ಮಾತನಾಡುವುದು ಬೇಕು ಅವನಿಗೆ. ಇಡೀ ದಿವಸ ಒಂದಲ್ಲ ಒಂದು ಏಲೆ ವಾರಿ ನಡೆಯಿಸುತ್ತಿರಬೇಕು. ಅವನು ಮಾತುಗಾರ. ಮಾತುಬಲ್ಲ ಜನರೊಡನೆಯೆ ಅವನ ಸಂಪರ್ಕ. ಬರಿಯ ಲಾಟ್ ಪ್ಲೋಟ್ ಜನರೊಡನೆ ಸಮಯ ಕಳೆಯುವವನಲ್ಲ.

ಊರಿಗೆ ಕಲೆಕ್ಟರರು ಬಂದರೆ ಸರಿ, ಯಾರನ್ನಾದರೂ ಹಿಡಿದು ಅವರಿಗೆ ಸರಬರಾಯ ಮಾಡಿಸುವನು. ಅದರಿಂದ ತಹಸಿಲ್ದಾರರೂ ಸಹ ವಾಸುಧೇವಯ್ಯನನ್ನು ತಮ್ಮ ಜನವೆಂಧೇ ತಿಳಿಯುತ್ತಾರೆ. ಊರಿಗೆ ರಜಾ ಸಮಯಕ್ಕೆ ವಕೀಲರು ಬಂದರೆ—ಸರಿ, ಒಂದು ತಿಂಗಳಿದ್ದರೂ, ಅವರಿಗೆ ಸಂತರ್ಪಣೆ ಮಾಡಿಸುತ್ತಾನೆ. ವಕೀಲರನ್ನು ಊರಿನ ಪ್ರತಿಯೊಂದು ಮನೆಯ ಗುಡಿಸಲಿನೊಳಗೆ ಹೊಕ್ಕಿಸಿ ಬಿಡುತ್ತಾನೆ. ಆ ವಕೀಲರ ಹೆಸರನ್ನು ಕೇಳದವರಾದರೂ ಚಿಂತೆಯಿಲ್ಲ—ವಾಸುದೇವಯ್ಯನ ಬಾಯಿಗೆ ಮೆಚ್ಚಿ ಸಕ್ಕರೆ ಪಾನಕ ಕೂಡಲೆ ಕಾಫಿ ಅನಂತರ ಎಳನೀರು ಕೊಡಿಸುತ್ತಾರೆ. ಅರ್ಧ ಘಂಟೆ ಜಾಸ್ತಿನಿಂತರೆ ಔತಣವನ್ನು ಅಲ್ಲೇ ಮಾಡಿಸಿ ಬಿಡುತ್ತಾನೆ. ಶ್ರಾದ್ಧದ ದಿವಸ ವಡೆ ಮಾಡಲು ಹಿಂದು ಮುಂದು ನೋಡುವವರು ಆ ದಿವಸ ಹೋಳಿಗೆ ಮಾಡಲು ಸಿದ್ಧರು. ಊಟವಾಗಿ ಎಲ್ಲರೂ ಹೋದಾಯಿತೆಂದರೆ ಮನೆಯವರು " ಆ ಅನಿಷ್ಟ ನಮ್ಮ ಮನೆಗೆ ಯಾರಾರನ್ನೆಲ್ಲ ತರುತ್ತದಪ್ಪ " ಎಂದು ಹೇಳುತ್ತಾರೆ.

ಒಂದು ದಿವಸ ವಾಸುದೇವಯ್ಯ ನನ್ನ ಮಿತ್ರರ ಮನೆಗೆ ಬಂದಿದ್ದನು. ಮಾತು ಮಾತಾಗಿ ಮದುವೆ ಪ್ರಸ್ತಾಪ ಬಂದಿತು. "ಛೀ, ಮದುವೆಗೆ ಅಷ್ಟು ಯೋಚನೆಯೇ? ಇವತ್ತಿಗೆ ಸಾಲ್ಕು ದಿವಸದಲ್ಲಿ ನಿಮ್ಮ ಹುಡುಗನಿಗೆ ಚಿನ್ನದಂಥಾ ಹುಡುಗಿ ಸಂಪಾದಿಸುತ್ತೇನೆ. ತರಹವಾರು ಜನರಿದ್ದಾರೆ. ರೆಡಿ· ನಿಮ್ಮ ಮಗನಿಗೆ ಎಷ್ಟು ಪ್ರಾಯದ್ದು ಬೇಕು? ೮ ವರ್ಷದಿಂದ ೧೮ ವರ್ಷದ ವರೆಗೆ. ಏನೂ ಆಸ್ತಿಯಿಲ್ಲದ ಪಾಪ್ರಿಯಿಂದ ಹಿಡಿದು ಸಾವಿರ ರೂಪಾಯಿ ಕಂದಾಯ ಕೊಡುವ ಮಾವನ ವರೆಗೆ. ಓದುಬಾರದ ಮುಕ್ಕಮ್ಮನನ್ನು ತೊಡಗಿ ಬಿ.ಎ. ಕಲಿತ ಚಿನ್ನಮ್ಮನ ತನಕ—ರೆಡಿ" ಎಂದನು.

ಅಂದುದಷ್ಟೇ ಅಲ್ಲ, ಇಡೀ ಕೆಟಲಾಗನ್ನು ಬಿಡಿಸಿದನು. "ಯಾವು ದಾಗ ಬಹುದು ಹೇಳಿ. ಈ ವಾರದಲ್ಲೇ ಮದುವೆ ಹುಡಿ ಹಾರಿಸಿಬಿಡುವ" ಎಂದನು. ನನ್ನ ಮಿತ್ರರು ಎದ್ದು "ನನಗಿರುವುದು ಹುಡುಗನ ಚಿಂತೆ ಯಲ್ಲ, ಹಿರೆ ಮಗಳ ಚಿಂತೆ. ವಯಸ್ಸಾಯಿತು" ಎಂದರು. ಕೂಡಲೆ ವಾಸುದೇವಯ್ಯ "ಏಲೆವಾರಿ ಪಡಿಸುವ. ಎಷ್ಟು ಜನ ಅಳಿಯಂದಿರು ಬೇಕು?" ಎಂದು ಒಂದು ಭಾರಿ ಕೆಟಲಾಗನ್ನು ಬಿಡಿಸಿದನು. "ಯಾಕೆ ಡಬ್ಬಲ್ ಮದುವೆ ಮಾಡಿಬಿಡುವ. ಅಲ್ಲಿಯ ಹುಡುಗಿ ನಿಮ್ಮ ಮಗನಿಗೆ, ನಿಮ್ಮ ಹುಡುಗಿ ಅವರ ಮಗನಿಗೆ ಸಾಟಿ ವ್ಯಾಪಾರ. ಖರ್ಚು ಕೂಡ ಸಲೀಸಾದೀತು" ಎಂದು ಬಿಟ್ಟನು.

ಇಂಥ ಒಂದು ನೂರು ಮದುವೆ ಮಾಡಿಸಲು ವಾಸುದೇವಯ್ಯ ರೆಡಿ. ಒಮ್ಮೆ ಮುಖ್ಯ ಗಳಿಗೆಯಲ್ಲಿ ನೆಂಟಸ್ತಿಕೆ ಮುರಿಯಿತೆಂದರೆ, ಕೂಡಲೆ ಇನ್ನೊಂದು ಹುಡುಗನನ್ನೋ, ಹುಡುಗಿಯನ್ನೋ ನಿಂತ ಮೆಟ್ಟಿಗೇನೆ ತರಿಸಲು ಸಿದ್ಧ. ಅವನ ಬಾಯಿಯಲ್ಲಿ ಅರಸರು ಅಂಧರಾದದ್ದುಂಟು, ಅಂಧರು ಅರಸರಾದದ್ದುಂಟು.

ಇಷ್ಟು ಗಲಾಟೆ ಎಬ್ಬಿಸಿದರೂ, ಸ್ವತಃ ಅವನಲ್ಲಿ ಒಂದು ಕಾಸಿಲ್ಲ. ಬಲು ದರ್ಬಾರಿಯಿಂದ ಜೀವನ ಹೋಗಬೇಕು. ಸಿಗರೇಟು ವಿನಃ ಅಗ್ಗದ ಬೀಡಿ ಸೇದಿದವನೇ ಅಲ್ಲ. ಒಂದು ದಿವಸವಾದರೂ ಮೊಸರೂಟವಿಲ್ಲದೆ

ಅವನಿಗೆ ಕಳೆಯದು. ಊರಿನ ಯಾವ ಮದುವೆ ಮನೆಯಲ್ಲೂ ಅವ ನಿದ್ದಾನೆ. ಎಲ್ಲರ ಸ್ವರಕ್ಕಿಂತಲೂ ಅದನ ಸ್ವರ ಮೇಲು. ಮೊದಲಾಗಿ ಯಜಮಾನರ ಬಳಿ ಹೋಗಿ "ಬಂದಿದ್ದೇನೆ—ಏನು ಕೆಲಸ ಹೇಳಿ. ರೆಡಿ" ಎನ್ನುವನು. "ಆಗಲಿ ಮಹಾರಾಯ" ಎಂದು ಯಜಮಾನರು ಹೇಳಿದರೆ ಅಷ್ಟಕ್ಕೆ ಬಿಡಲಾರ. "ಏನಾಗಬೇಕು ಹೇಳಿ? ಮೊಸರಿಗೆ ಏನು ಏರ್ಪಾಟಾಯಿತು? ಮೊಸರಿಲ್ಲದ ಬಜ್ಜದ ಊಟವೇ ಅದು?" ಎನ್ನುತ್ತಾನೆ. "ಬಡವರಿಗೆ ಮೊಸರು ಎಲ್ಲಿ ಸಿಕ್ಕುವುದು ಈ ದಿವಸದಲ್ಲಿ?" ಎಂದರೆ ಯಾರನ್ನಾದರೂ ಬೆದರಿಸಿ, ಊರಿಗೆ ಕಲೆಕ್ಟರರಾದರೂ ಬರುತ್ತಾರೆ ಎಂದು ಹೇಳಿ, ಮೊಸರನ್ನು ತರಿಸದೆ ಇರಲಾರ. ಮೊಸರಿಲ್ಲದೆ ಅವನ ಊಟವೇ ಆಗಲಾರದು.

ಒಂದು ದಿವಸ ವಕೀಲ ರಂಗರಾಯರ ಮಗಳಿಗೇನೆ ಮದುವೆ. ವಾಸುದೇವಯ್ಯನು ಮಂಗಳೂರು ವಕೀಲ ವೆಂಕಟ್ರಮಣಯ್ಯನವರ ಕಡೆಯ ರಾಯಭಾರಿ. ಎಲ್ಲಾ ವಿಲೆವಾರಿಗೂ ಅವನೇ ಎಂಬುದು ನಿಶ್ಚಯವಾಗಿತ್ತು. ಮದುವೆ ದಿನ—ಉಭಯ ಬೀಗರೂ ವಕೀಲರು; ನಡುವೆ ವಿಲೆವಾರಿ ವಾಸುದೇವಯ್ಯ; ಏರ್ಪಾಡು ವ್ಯವಸ್ಥೆ ಗದ್ದಲ ಕೇಳಬೇಕೇ? ಮದುವೆಯ ಮಧ್ಯಾಹ್ನ. ಧಾರೆಯಾಯಿತು. ವಾಸುದೇವಯ್ಯ ಪಾಕಶಾಲೆಯಲ್ಲಿ ನಿಂತು—"ಛೀ ಕೇಸರಿ ಇಲ್ಲದ ಮೇಲೆ ಪರಮಾನ್ನವೇ ಕೆಟ್ಟಿತಯ್ಯ" ಎಂದು ಬೊಬ್ಬೆ ಹೊಡೆಯುತ್ತಾನೆ. ಅವನ ಮಗ್ಗುಲ ಕಡೆಯಿಂದ ಯಾರೊ ತಮ್ಮಷ್ಟಕ್ಕೆ "ಹೌದೇ ರಾಮಯ್ಯ, ಊರಿಗೆ ಬಂದ ವಕೀಲ ಲಕ್ಷ್ಮೀಪತಿರಾಯರು ಈ ಮದುವೆಗೆ ಬರಲಿಲ್ಲ ಎಂದರೇನು?" ಎನ್ನುತ್ತಿದ್ದರು. ಲಕ್ಷ್ಮೀಪತಿರಾಯರು ಮದ್ರಾಸು ಹಾಯ್ ಕೋರ್ಟಿನ ವಕೀಲರು. ಅಸಾಮಾನ್ಯ ಕೀರ್ತಿ ಅವರದು. ಅವರ ಹೆಸರು ಕೇಳಿದ್ದೇ ತಡ, ವಾಸುದೇವಯ್ಯನಿಗೆ 'ಕೇಸರಿ' ಮರೆತು ಹೋಯಿತು. ಹೊರಕ್ಕೆ ಬಂದನು. ಹೊರಗೊಂದು ಸೈಕಲ್ಲಿತ್ತು. ಕೂಡಲೇ ಏರಿ ಲಕ್ಷ್ಮೀಪತಿರಾಯರ ಮನೆಗೆಂದು ಹೊರಟೇ ಬಿಟ್ಟನು.

ಆ ದಿನ ಸಂಜೆ ನಾನು ಅಕಸ್ಮಾತ್ ಸುಬ್ರಮಣ್ಯದ ಕಡೆಗೆ ಹೋಗಿದ್ದೆ. ದೇವಸ್ಥಾನದ ಮುಂದಿನ ರಸ್ತೆಯಲ್ಲಿ ವಾಸುದೇವಯ್ಯನ ಭೇಟಿಯಾಯಿತು. "ಏನು ವಾಸುದೇವಯ್ಯ, ವೆಂಕಟರಮಣಯ್ಯನವರ ಮದುವೆ ಗದ್ದಲ ಬಿಟ್ಟೆ ಯಾಕೆ" ಎಂದೆ. ಅದಕ್ಕವನು "ಅದು ಸರಿಯೋ, ಏನು ಮಾಡಲಿ? ಡಿ. ಎಫ್. ಓ. ದೊರೆಗಳು ನಾನಿಲ್ಲದೆ ನಿರ್ವಾಹವಿಲ್ಲ ವೆಂದು ಕಾರಿನಲ್ಲಿ ಹಾಕಿಕೊಂಡು ಇಲ್ಲಿಗೆ ಕರೆತಂದರು. ಈಗ ಅವರೊಟ್ಟಿಗೆ ತಿಕಾಣಿಗೆ ಹೋದರೂ ಹೋಗಬೇಕು. ಊಟವಿಲ್ಲ, ಮಣ್ಣಿಲ್ಲ. ಅವರಿಗೂ ಊಟ ಆಗಿಲ್ಲ. ಮೊಸರಿಗೆ ನಂಜಣ್ಣ ಗೌಡರಲ್ಲಿಗೆ ಹೇಳಿ ಕಳುಹಿಸಿದ್ದೇನೆ" ಎಂದನು.

ಹಾಗೆ ಮಾತಾಡುತ್ತಾ ನಾವು ಕುಳ್ಕುಂದದ ಬಯಲಿಗೆ ಬಂದೆವು. ವಾಸುದೇವಯ್ಯನಿಗೆ ದೊರೆಗಳ ನೆನಪಾಗಿ, ತಿರುಗಿ ಸುಬ್ರಮಣ್ಯಕ್ಕೆ ಹೋದನು --ಅಥವಾ ಹೋಗಿರಬೇಕು!





# ಪ್ರದರ್ಶನದ ಪಾವಪ್ಪನವರು

ಪಾವಪ್ಪನವರು ಹೆಸರಿಗೆ ಮಾತ್ರ---ನೋಟಕ್ಕೆ ಅವರು ನಿಜವಾಗಿಯೂ ಕೋರ್ಜಿ (ಮುಡಿ) ಅಕ್ಕಿ ದಾಸ್ತಾನಿರುವ ಕುತ್ತಾಟದಂತೆ ಕಾಣುತ್ತಾರೆ. ಏನು ಭೀಮ ಕಾಯ! ಏನು ಮೆಲು ನಡಿಗೆ. ಹಿಂದಿನ ಕವಿಗಳು---ಮದಗಜ ಗಮನವನ್ನು ಕುರಿತು ಕೊಂಡಾಡಿದ್ದರೆ ನಮ್ಮ ಪಾವಪ್ಪನವರನ್ನು ಕುರಿತೇ ಅದು ಹೇಳಿರಬೇಕು. ಆ ಅಲಂಕಾರಕ್ಕೆ ಸ್ತ್ರೀಲಿಂಗವನ್ನು ಸೇರಿಸಿ ಮದಗಜಗಮನೆ---ಎಂದು ಮಾಡಿದರು.

ಪಾವಪ್ಪನವರು ಒಳ್ಳೇ ಮಿಲಿಟರಿ ಜನಾಂಗಕ್ಕೆ ಸೇರಿದವರು. ನಮ್ಮ ಜಿಲ್ಲೆಯ ಮೂಲ ನಿವಾಸಿಗಳಲ್ಲಿ ಒಬ್ಬರು, ಬಂಟರು. ಆದರೆ ನಾನು ಮಾತ್ರ ಇದು ತನಕ ಅವರು ಸಿಟ್ಟಾದುದನ್ನು ಕಂಡವನಲ್ಲ. ಅವರ ಶರೀರವನ್ನು ನೋಡುವಾಗ, ಈ ಶರೀರದಿಂದ ಸಿಟ್ಟಿನ ಜ್ವಾಲಾಮುಖಿ ಒಡೆದರೆ ಏನಾದೀತು---ಎಂದು ಅಂಜಿದ್ದುಂಟು. ಆದರೆ ಅವರನ್ನು ನೀವು ಅತಿಯಾಗಿ ಕೆರಳಿಸಿದರೆ ಪ್ರಸನ್ನರಾಗಿ ನಕ್ಕಾರು. ಇನ್ನೂ ಕೆರಳಿಸಿದರೆ---ವೀಳೆಯನ್ನು ಕೊಟ್ಟಾರು. ರಣ ವೀಳೆಯಲ್ಲ—ಮುಕ್ಕಾಲಿಗೆ ಮೂರರ ಬೀಡಾ.

ಹಿಂದೊಂದು ಕಾಲದಲ್ಲಿ ಅವರು ಗ್ರಾಮದ ಶ್ಯಾನುಭಾಗರಾಗಿದ್ದರು. ಎಷ್ಟೋಬಾರಿ ಅವರು ಸಂಕಲೆ ಹಿಡಿದು ಸಂಚಾರಕ್ಕೆ ಕಾಡಿಗೆ ಹೋದಾಗ, ಅವರ ತಹಶಿಲ್ದಾರರು ' ಕಾಡಾನೆ ಬಂತು ' ಎಂದು ಹೆದರಿ ಓಡಿ ಹೋಗಿದ್ದರಂತೆ. ತನ್ನಿಂದ ಮೇಲಾಫೀಸರರಿಗೆ ಈ ರೀತಿ ಅಂಜಿಕೆ ಬೇಡವೆಂದು ತಮ್ಮ ಕೆಲಸಕ್ಕೆ ರಾಜಿನಾಮೆ ಕೊಟ್ಟರು.

ಅಂತರ್ರಾಷ್ಟ್ರೀಯವಾಗಿ ಓಟದ ಸ್ಪರ್ಧೆಗೆ ಯಾರನ್ನಾದರೂ ನಮ್ಮ ಜಿಲ್ಲೆಯಿಂದ ಕಳಿಸುವುದಾದರೆ---ಅದಕ್ಕೆ ಪಾವಪ್ಪನವರೇ ಬೇಕು.

ಖಂಡಿತ ಅವರಿಂದ ನಮಗೆ ಜಯವಿದೆ. ಅವರ ಓಟ ಅಷ್ಟು ಚುರುಕೆಂದಲ್ಲ. ಅವರು ಓಟದ ಹಾದಿಯಲ್ಲಿ ನಿಂತರೆ, ಉಳಿದ ಸ್ಪರ್ಧಿಗಳು ನಿಲ್ಲಲು ಜಾಗವೇ ಇಲ್ಲ. ಆಗ ಅವರೇ ಏಕಮಾತ್ರ ವೀರರಾಗುವರು.

ಅವರೊಡನೆ ಎಷ್ಟೋಬಾರಿ ಗುಡ್ಡದಿಂದ ಗುಡ್ಡಕ್ಕೆ, ಶಾಲೆಯಿಂದ ಶಾಲೆಗೆ ತಿರುಗಿದ್ದುಂಟು. ಹಾಗೆ ತಿರುಗಿದ ಬಗ್ಗೆ ಅವರಿಗೆ ನಿಜಕ್ಕೂ ಲೋಕಲ್ ಫಂಡಿನಿಂದ ಭತ್ತೆ ಸಿಗಬೇಕಿತ್ತು—(ರಸ್ತೆ ದಮಸದ ಬಗ್ಗೆ.) ನಮ್ಮ ಪಯಣ ೧೦ ಮೈಲು ಇರಲಿ, ೨೦ ಮೈಲು ಇರಲಿ—ಅವರು ಜತೆಯಲ್ಲಿ ಬರುತ್ತಾರೆ. ಹೋಗುವ ಕೆಲಸ ಒಳ್ಳೆಯದಾದರಾಯಿತು; ಉಳಿದ ವಿಚಾರ ಅವರಿಗಿಲ್ಲ. ಅವರ ಶರೀರವನ್ನು 'ತಾನಲ್ಲ, ಪರಮಾತ್ಮನು ಸಾಗಿಸಬೇಕು, ಶರೀರ ಭಾರ ಭೂತಾಯಿ ಹೊರಬೇಕು' ಎಂದು ಅವರಿಗೆ ಗೊತ್ತು. ಈ ವರ್ಷದ ಸ್ಕೂಲ್ ಡೇಗೆ ಅವರೊಡನೆ ಹೊರಟರೆ, ಮುಂದಿನ ವರ್ಷವಾದರೂ ನೀವು ತಪ್ಪದೆ, ಸ್ಕೂಲ್‌ಡೇಗೆ ಸಮಯಕ್ಕೆ ಸರಿಯಾಗಿ ಮುಟ್ಟುವಿರಿ—ಎಂಬುದು ಖಂಡಿತ.

ಅವರ ಮದಗಜಗಮನವನ್ನು ಅರಿತ ಅವರ ಗೆಳೆಯರು ಒಬ್ಬೊಬ್ಬರೇ ಸಹಕಾರಿ ಸಂಘ, ಸಾಹುಕಾರಿ ಸಂಘ, ವಿದ್ಯಾಸಂಸ್ಥೆ, ಗರ್ಭಿಣಿ ಮಂಡಳ, ಇನ್ನು ಆಗಲಿರುವ ಆಗಿರುವ ಎಲ್ಲಾ ಸಂಸ್ಥೆಯ ಮುಂದಾಳುಗಳು ಹೋದಲ್ಲೆಲ್ಲಾ ಅವರನ್ನು ಒಯ್ಯುತ್ತಾರೆ. ಅವರು ಮೇಲು ನಡೆಯಿಂದ ಹೋಗುವ ಠೀವಿಯನ್ನು ನೋಡಿದರೆ, ಹಾದಿಯಲ್ಲಿ ಹೋಗುವ ವಿಮಾನಯುಗದ ಸಂಪಾಜೆ ಕಾಫೀ ಬೀಜದ ಲಾರಿಗಳೂ ಸಹ ಭಕ್ತಿಯಿಂದ ಹೆಜ್ಜೆ ಇಡುವುವು.

ಸರಿ, ನಮ್ಮ ಪಾವಪ್ಪನವರನ್ನು ಒಯ್ಯುವದಾದರೆ ಎಲ್ಲಿಗೆ? ಎಲ್ಲಿಗೂ ಒಯ್ಯಿರಿ ಅವರು ಬರುತ್ತಾರೆ. ಅವರಿಗೆ ಎಲ್ಲಾ ಸಾರ್ವಜನಿಕ ಸಂಸ್ಥೆಗಳಲ್ಲೂ ಉತ್ಸಾಹವಿದೆ, ಉಲ್ಲಾಸವಿದೆ. ಸಹಕಾರಿ ಸಂಸ್ಥೆ, ರಾಜಿ ಪಂಚಾಯತಿ, ಯಕ್ಷಗಾನ ಮಂಡಳದ ಸಮಾರಂಭ, ಗ್ರಾಮಸುಧಾರಣೆಯ ಆವೇಶ, ಶಾಲಾವರ್ಧಂತಿ, ಸೂಲಗಿತ್ತಿಯರ ಕ್ಲಾಸು, ಕೋಳಿ ಇಲ್ಲವೆ ತರ

ಕಾರಿಗಳ ಪ್ರದರ್ಶನ (ಇರಡೂ ಸಮ) ಎಲ್ಲವೂ ಅವರಿಗೆ ಬೇಕಾದುದು. ಬೆಳಗಿನಿಂದ ಹಿಡಿದು ಸಂಜೆಯವರೆಗೆ ಅದಕ್ಕಾಗಿ ಕೆಲಸಮಾಡುವರು. ಪರ್ವತದಂಥ ಶರೀರ; ಅದರಷ್ಟೆ ಗಾತ್ರದ ಉತ್ಸಾಹ; ಅವರಂಥ ಶ್ರದ್ಧೆ.

ನೀವೆನ್ನಬಹುದು "ಒಬ್ಬನಿಂದ ಇಷ್ಟೆಲ್ಲಾ ಆಗುತ್ತದೇಯೆ? ಎಲ್ಲ ಹಾಳು ಏನುಫಲ?" ಎಂದು ನೀವು ಎನ್ನುತ್ತಲೇ ಇರಿ. ನಿಮ್ಮ ಕಣ್ಣೆದುರಿಗೆ ಪಂಜಾಯತ ಸಭೆಯೆನ್ನೋ, ಸಹಕಾರಿ ಸಮಾರಾಧನೆಯೆನ್ನೋ, ತರಕಾರಿ ಪ್ರದರ್ಶನವನ್ನೋ ಕೂಡಿಸಿ ಕೆಂಪುಶಾಯಿಯಿಂದ ಅದರ ಪ್ರೊಸೀಡಿಂಗುಗಳನ್ನು ಬರೆದೇ ಬಿಡುತ್ತಾರೆ. ಯಾರೂ ಬರಲಿಲ್ಲವೇ? ಶಾಲಾ ಮಕ್ಕಳನ್ನಾದರೂ ಕರೆದುತಂದಾರು. ಅವರೂ ಒಪ್ಪದಿದ್ದರೆ ಅವರ ಸಲುವಾಗಿ ಅವಲಕ್ಕಿ ಪಂಚಕಜ್ಜಾಯವನ್ನಾದರೂ ಮಾಡಿಯಾರು.

ಅವರ ಕೀಸೆಯೇ ತೂತು. ಅವರ ಹೊಟ್ಟೆಯಲ್ಲಿ ಕರುಳು ಕುಣಿದ ಶಬ್ದವಾದರೂ ಕೇಳೀತು; ಅವರ ಕೀಸೆಯಲ್ಲಿ ಕಾಸುಕುಣಿದ ಶಬ್ದ ನಾನು ಕೇಳಿಲ್ಲ. ಆದರೆ ಎಲ್ಲಾ ಸಾಹಸಕ್ಕೆ ಅವರು ಮುಂದಾಳು. ಅವರ ಯತ್ನಗಳಿಗೆ ದುಡ್ಡುಬೇಡವೇ ಎಂಬ ಸಂಶಯ ನಿಮಗೆ ಬಂದೀತು.

ಒಂದು ದಿನ ನಾನು ಅವರ ಊರಿಗೆ ದೊಡ್ಡ ಮನುಷ್ಯನಾಗಿ ಹೋಗಿದ್ದೆ. ಮಹಾಸಭೆಗಳೆರಡು, ಮಹಾನಾಟಕಗಳೆರಡು, ಮಹಾ ಯಕ್ಷಗಾನ ಒಂದು—ಜುಮ್ಲಾ ೫ ಕಾರ್ಯಕ್ರಮಗಳನ್ನಿರಿಸಿಕೊಂಡಿದ್ದರು. ನಾನೆಂದೆ 'ಪಾವಪ್ಪನವರೇ, ಜನರು ಕಾಣುವುದಿಲ್ಲ—ಏನು ಎಲ್ಲಾ ಕಡೆಗೂ ವರ್ತಮಾನ ಹೋಗಿಲ್ಲವೇ?' ಎಂದು. 'ಛೆ, ನೋ ಫಿಯರ್-(ಇಂಗ್ಲೀಷು) ಇರುವೆಗಳ ಸಾಲಿನಂತೆ ಬರುತ್ತಾರೆ' ಎಂದರು. ನನಗೆ ಕಾದು ಕಾದು ಬೇಸರವಾಯಿತು. ಕುಳಿತಲ್ಲಿ ನಿದ್ರೆ ಬಂದಿತು. (ನಿದ್ರೆಯಲ್ಲಿ ನನಗೂ ಮೀರಿದ ನಿಪುಣರು ಅವರು. ನಾನು ಕುಳಿತಲ್ಲಿ ನಿದ್ರೆ ಮಾಡಿದರೆ ಅವರು ನಡೆಯುವುದೇ ನಿದ್ರೆಯಲ್ಲಿ.) ರಾತ್ರಿ ಎಂಟು ತಾಸಿಗೆ ಎಚ್ಚರವಾಯಿತು. ಏಕೆ ಎಚ್ಚರವಾಯಿತು ಎಂದು ಸುತ್ತೆಲ್ಲ ನೋಡಿದೆ. ನಾನು ಮಲಗಿದ ಚಾಪೆಯೆಲ್ಲಾ ಇರುವೆಯಿಂದ ಮುತ್ತಲ್ಪಟ್ಟಿತ್ತು.

'ಪಾವಪ್ಪನವರೇ—ಇವೇ ಇರುವೆಗಳೇನು ಸಭೆಗೆ' ಎಂದೆ. ಅವರೂ ನಕ್ಕರು.

ಅದೇ ಊರಿನಲ್ಲಿ ನನ್ನೆದುರಿಗೇ ಒಂಬತ್ತು ಪ್ರದರ್ಶನಗಳು ಆಮೇಲೆ ಆಗಿದ್ದವು. ಅಲ್ಲಾದ ಒಂದು ತರಕಾರಿ ಪ್ರದರ್ಶನದ ವಿಚಾರ ಹೇಳುತ್ತೇನೆ. ನಾನು ಆತುರದಿಂದ ಅವರೇ ಹಂಚಿದ ಹ್ಯಾಂಡ್ ಬಿಲ್ಲು ನೋಡಿ ಹೋಗಿದ್ದೆ. ಪ್ರದರ್ಶನದ ಚಪ್ಪರದ ಬಳಿ ಹೋಗಲು ಸ್ವಾಗತಿಸಿ ಎಳನೀರು ಕೊಡಿಸಿದರು. ಪ್ರಸನ್ನನಾದೆ. ಅನಂತರ ಅಲ್ಲಿ ನೆರೆದ ಜನರನ್ನು ತೋರಿಸಿದರು. 'ಪ್ರದರ್ಶನವೆಲ್ಲಿ' ಎಂದು ನಾನಂದೆ. ಸುತ್ತು ತೋರಿಸಿದರು. ಇದು ಬಾಳೆ—ಮುಂದಿನ ವರುಷ ಹಣ್ಣಾಗಲಿರುವ ತೆನೆ; ಇದು ಶುಂಠಿ—ಇದರ ಪುಡಿಯನ್ನು ವಿಲಾಯತಿಗೆ ಕಳುಹಿಸುವುದು—ಎಂದರು. ಇನ್ನೂ ಹಾಗೇ ಹತ್ತೆಂಟು ಬುಟ್ಟಿಗಳನ್ನು ತೋರಿಸಿದರು. ಕಂಡು ನಕ್ಕೆ. 'ಇದೇನು ಪ್ರದರ್ಶನ?' ಎಂದೆ. ಅವರೂ ನಕ್ಕರು. ಬೇಸರ ಬಂದು ಚಪ್ಪರದ ಹೊರಕ್ಕೆ ಬಂದೆ. ಪಾವಪ್ಪನವರು ಅಲ್ಲೇ ಕುಳಿತರು. ಹೊರಗಿನಿಂದ ನಿಂತುಕೊಂಡು ನೋಡಿದರೆ ಚಪ್ಪರ ತುಂಬಿಕೊಂಡ ಹಾಗೆ ಕಾಣುತ್ತಿತ್ತು. ನನಗೆ ಆಶ್ಚರ್ಯವಾಯತು. 'ಯಾರಪ್ಪ ಇದು ಇಷ್ಟು ದಪ್ಪದ, ಮುಂಡಿಗಡ್ಡೆ (ಮರಸಣಿಗೆ) ಕಳುಹಿಸಿದವರು' ಎಂದೆ. ತಿರುಗಿ ಒಳಗೆ ಹೋಗಿ ನೋಡಲು ನನ್ನ ಭ್ರಮೆ ಬಯಲಾಯಿತು. ಕಂಡದ್ದು ಮುಂಡಿಗಡ್ಡೆಯನ್ನಲ್ಲ ಪಾವಪ್ಪನವರ ಶರೀರವನ್ನು.

ಅನಂತರ ಅದೇ ಊರಲ್ಲಿ ಆರು ಕೃಷಿಪ್ರದರ್ಶನಗಳೂ, ಎಂಟು ಕೊಕ್ಕೆ ಹುಳುವಿನ ಪ್ರದರ್ಶನಗಳೂ ಆದುವು. ಇನ್ನೊಮ್ಮೆ ನಾಲ್ಕು ವರ್ಷಗಳ ತರುವಾಯ, ಅದೇ ಊರಲ್ಲಿ ಅದೇ ಪಾವಪ್ಪನವರ ಕೇಳಿಕೆಯಂತೆ ಮಕ್ಕಳ ಕೂಟವನ್ನು ಜರುಗಿಸಿದ್ದಾಯಿತು. ಒಂದು ಸಂಜೆ—ಚಪ್ಪರದ ಎದುರಿನಲ್ಲಿ ದೂರದಿಂದ ಇರುವೆಯ ಸಾಲೊಂದು ಇಳಿಯಿತು! ಸಾಧಾರಣ ಐವತ್ತು—ನೂರುಮಂದಿ ಹೊಲೆಯರು ಸಾಲುಸಾಲಾಗಿ ಬರುತ್ತಿದ್ದರು ನಮ್ಮಲ್ಲಿಗೆ. ನಿಜಕ್ಕೂ ಇರುವೆಗಳ ಸಾಲಿನಂತೆ, ಅದೇ ಭಕ್ತಿಯಿಂದ

ಬಂದು ಮಕ್ಕಳಿಗೆ ತರಕಾರಿಯ ಕಾಣಿಕೆಯಿತ್ತರು. ಕನಸೆಂದು ತಿಳಿದೆ. ಎಲ್ಲವೂ ಕನಸೆಂದು ನಂಬಿದೆ. ನಿಜಕ್ಕೂ—ಹಿಂದಿನ ಇರುವೆಗಳ ಸಾಲು, ತರಕಾರಿಯ ಪ್ರದರ್ಶನವನ್ನು ಹೊತ್ತು ನಮ್ಮ ಮುಂದೆ ಆ ದಿನ ಇಳಿಸಿತು.

ಪಾವಪ್ಪನವರ ಡೊಳ್ಳು, ಬೊಜ್ಜುಗಳೆಲ್ಲಾ ಪರ್ವತಪ್ರಾಯವಾದ ವಿಶ್ವಾಸದಿಂದ ನಿರ್ಮಿತವಾಗಿತ್ತೆಂದು ಆಗ ಮನಗಂಡೆ.





# ಮಸಲ್ ಮಾಧು

ಮಾಧುವಿನ ಜೀವನದ ಅವಸ್ಥಾತ್ರಯಗಳನ್ನು ಕುರಿತು ಏನೋ ಬರೆಯಬೇಕೆಂದು ಹಂಬಲ. ಮಾಧುವನ್ನು ನಾನು ಚಿಕ್ಕದೊಡ್ಡವರ, ಇಲ್ಲವೆ ದೊಡ್ಡ ಚಿಕ್ಕವರ ಸಾಲಿಗೆ ಸೇರಿಸುವುದು ತುಸು ಅಸಮಂಜಸವಾಗ ಬಹುದು. ಕಾರಣ ಅವನ ಜೀವನದ ಪಾಕ ಒಂದೇ ಹದದಲ್ಲಿ ನಿಲ್ಲಲೇ ಇಲ್ಲ. ಹಿಂದೆ ಚಿಕ್ಕದೊಡ್ಡವನಾಗಿ, ಅನಂತರ ದೊಡ್ಡ ಚಿಕ್ಕವನಾಗಿ ಈಗ ಇನ್ನೇನೋ ಆಗಿದ್ದಾನೆ. ಅಂತು ಸಮಾಜದಲ್ಲಿ ಅನೇಕ ಆಕರ್ಷಕ ಚಿತ್ರಗಳಲ್ಲಿ ಅವನದ್ದೊಂದು. ಮಾಧು ನಮ್ಮ ಗೆಳೆಯ. ಒಂದೇ ದೊಡ್ಡಿಗೆ ಪಾಠ ಹೇಳಲು ಹೋದ ಆಸಾಮಿಗಳು ನಾವು. ಏನೋ ನಮ್ಮ ನಮ್ಮ ತರಗತಿಗಳಲ್ಲಿ ಇಷ್ಟು ವ್ಯತ್ಯಾಸವಾದುದರಿಂದ ಶಾಲೆಯ ನಾಲ್ಕೈದು ತಾಸುಗಳನ್ನು ಬಿಟ್ಟರೆ ಉಳಿದ ಸಮಯ ಜತೆಯಲ್ಲೆ ಇರುತ್ತಿದ್ದೆವು. ನಾವು ಎಂದರೆ ನಾನು ಮತ್ತು ನನ್ನ ಗೆಳೆಯರು. ಮಾಧುವಿಗೆ ಗೆಳೆಯರು ಒಬ್ಬಿಬ್ಬರಲ್ಲ ಎಲ್ಲರಿಗೂ ಬೇಕಾದವನು ಅವನಾಗಿದ್ದ. ಅವನನ್ನು ಕಂಡರೆ ಎಲ್ಲರಿಗೂ ಒಂದು ರೀತಿಯ ಆದರ. ಆಗ ಅವನ ಪ್ರಾಯ ೧೬ ವರುಷ. ಕಾಯ--ಒಂದು ಟನ್. ಆದರಿಂದಲೇ ನಮಗೆ ಅವನಲ್ಲಿ ಗೌರವ. ಅವನ ಮೈಯ ಮಾಂಸಖಂಡಗಳನ್ನು ಕಂಡು ಪೂಜಿಸುತ್ತಿದ್ದವರು ನಾವು. ಮಸಲ್ (ಸ ಒತ್ತು ಲೋಪ) ಮಾಧು ಎಂದು ಕರೆಯುತ್ತಿದ್ದೆವು. ನಮ್ಮಿಂದಾಗದ ಶಾರೀರಕ ಪೈಲುವಾನಗಿರಿಗೆ ಅವನನ್ನು ನೂಕುತ್ತಿದ್ದೆವು ನಾವು. ಹೆಚ್ಚೇನು? ಅವನ ಮೈಯಲ್ಲಿ ಮಾತ್ರವಲ್ಲ ಹೊಟ್ಟೆ ತಲೆ ಬುರುಡೆ ಎಲ್ಲಾ ಸ್ನಾಯುಖಂಡದಿಂದಲೇ ತುಂಬಿತ್ತು.

ಮಾಧುವಿಗೆ ಆಯಾಸವೆಂಬುದಿಲ್ಲ, ಕಷ್ಟವೆಂಬುದಿಲ್ಲ, ಆಲಸ್ಯವೆಂಬುದಿಲ್ಲ. ಅವನ ಒಂದು ದಿವಸದ ಕಾರ್ಯಕ್ರಮ ಕೇಳಿದರೆ ನಿಮಗೆ ಆಶ್ಚರ್ಯವಾದೀತು. ಬೆಳಗ್ಗೆ ಆರು ಘಂಟೆಗೆ ಎದ್ದನೆಂದರೆ, ಅಲ್ಲಿಂದ ಅವನ

ಕಾಲು ಸಂಜೆಯ ತನಕ ನಿಂತಲ್ಲಿ ನಿಲ್ಲುವ ಹಾಗಿಲ್ಲ. ಬೆಳಗಿನ ಸ್ನಾನಕ್ಕೆ ಕೆರೆಗೆ ಹೋದರೆ ೬ ರಿಂದ ೯ ರ ತನಕ ನೀರಿನ ಮೇಲೆಯೇ ಮೊಕ್ಕಾಮು. ಸ್ನಾನ ಮುಗಿಸಿ ಮನೆಗೆ ಬಂದರೆ ಗಂಜಿ ಊಟ. ಊಟದ ಅಳತೆ ಚೌಕ ಅಳತೆಯೇ. ಚಿಕ್ಕ ಊಟ ಮಾಡಿಯೇ ಅವನಿಗೆ ತಿಳಿಯದು. ಗಂಜಿ ಊಟವಾಗಿ ಶಾಲೆಗೆ ಹೋಗುತ್ತ ಒಮ್ಮೆ ಕಾಫಿ ಹೋಟೆಲನ್ನು ಸೇರುವುದು ಅವನ ಪದ್ಧತಿ. ಅಲ್ಲಿ ಅರ್ಧ ಡಜನು ಇಡ್ಲಿ ಸೇರಿಸಿಕೊಂಡು ಮುಂದಿನ ಮೊಕ್ಕಂ—ಅಂದರೆ ಶಾಲೆ.

ಶಾಲೆ ಪಾಠಗಳ ವಿಷಯ ಅವನನ್ನು ಕೇಳುವುದೂ ಒಂದೇ, ಅವನ ಮನೆಯ ಕಂಭವನ್ನು ಮಾತನಾಡಿಸುವುದೂ ಒಂದೇ. ಆದರೂ ಕ್ರಮವಾಗಿ ಪಾಸಾಗುತ್ತ ಬಂದು ಹದಿನಾರನೆ ವಯಸ್ಸಿಗೆ ಫೋರ್ತ್ ಫಾರ್ಮಿನಲ್ಲಿ ಕಾಲಿರಿಸಿದನು. ಶಾಲೆಯಲ್ಲಿ ಪಾಠವಾಗುತ್ತಿರುವಾಗ—ಒಮ್ಮೆ ಯಾರೋ ಪಿಸುಮಾತಿನಲ್ಲಿ—'ಅದೇ - ಅದೇನು ಪೇಟೆಯಲ್ಲಿ ಗದ್ದಲ' ಎಂದರು. ಮರುಕ್ಷಣ ಮಸಲ್ ಮಾಧುವು ಅಲ್ಲಿ ಕಾಣದಾದ. ಶಾಲೆ ಮುಗಿಯುವ ಹೊತ್ತಿಗೆ ಮೈಯೆಲ್ಲ ಮಸಿಮಾಡಿಕೊಂಡು ಮರಳಿಬಂದನು. ನಮಗೆಲ್ಲಾ ಆತುರ "ಏನು ಮಾಧು? ಏನು ಮಾಧು?" ಎಂದು ಕೇಳಿದೆವು. "ಅಲ್ಲಿ, ಹೊಳೆಯಾಚೆ ಪಟೇಲರ ಮನೆಗೆ ಬೆಂಕಿ ಬಿದ್ದುದಲ್ಲವೇ? ಎಂಥಾ ಗಮ್ಮತ್ತಿನ ಬೆಂಕಿ ಗೊತ್ತೇ. ನೂರು ಜನರು ನೋಡುತ್ತ ನಿಂತಿದ್ದರು. ಒಳ್ಳೇ ಮಕ್ಕಳು! ಹೋಗಿ ನಾಲ್ಕು ಚಪಾಯಿಸಿ, ಅವರಿಂದ ನೀರು ಹೊರಿಸಿ, ನೊಂದಿಸಿ ಬಂದೆ" ಎಂದ. 'ಏನು? ಯಾರಾದರೂ ಖಲಾಸಾದರೇ?' ಎಂದು ಕೇಳಿದೆ.

"ಅದು ಮಾತ್ರ ಆಗಲಿಲ್ಲ. ಮನೆ ಒಳ ಅಂಗಣದಲ್ಲಿ ಆ ಮುದಿ ಪಟೇಲ ಬೊಬ್ಬೆ ಹೊಡೆಯುತ್ತಿದ್ದ. ಆದರೂ ಅವನನ್ನು ತಪ್ಪಿಸುವವರು ಯಾರು? ಮಾಡು ಹತ್ತಿ, ಒಳಗೆ ಹಾರಿ, ಬಾಗಿಲು ಮುರಿದು ಆ ಮುದುಕನನ್ನು ಬಚಾವು ಮಾಡಿದೆ. ಆ ಮುದಿ ಎಂಥ ಮಣ್ಣಿಗೆ ಬದುಕುವುದು? ನನ್ನಪ್ಪಯ್ಯನಿಗೆ ಸರಿಯಾಗಿ ಒಂದು ನೂರು ರೂಪಾಯಿ ಠಕಾಯಿಸಿದ್ದ. ಹೋಗಲಿ ಸತ್ತು ಕೊಳ್ಳಲಿ ಎಂದು ಬದುಕಿಸಿದೆ".

"ಯಾವ ಮುದುಕ?"

"ಅದೇ ಆ ದಿವಸ ಆದಿತ್ಯವಾರ ರಾತ್ರಿ ಅವನ ಸೌತೆ ಹಿತ್ತಿಲಿನ ಬೇಲಿ ಹಾರಿ, ಚಪಾಯಿಸಿದೆವಲ್ಲ! ಆ ದಿವಸ ನೂರು ರೂಪಾಯಿಯಲ್ಲಿ ಒಂದು ನಾಲ್ಕಾಣೆ ಕಾಸು ಬಂದಿತ್ತು."

ಇಷ್ಟೆಲ್ಲ ಪುರಾಣವನ್ನು ಉಪಾಧ್ಯಾಯರು ಕೇಳುತ್ತಲೇ ಇದ್ದರು. ಅವರಿಗೆ ನಗು ಬಂದಿತು. "ಹೋಗು ಸ್ನಾನ ಮಾಡಿ ಬಾ" ಎಂದರವರು.

"ಸ್ನಾನವಿಲ್ಲದಿದ್ದರೆ ಇಲ್ಲ. ಆ ಹೋಟಲಿಗೆ ಹೋಗಿ ನಾಲ್ಕು ಬಿಸ್ಕುಟಂಬೊಡೆ ದಬಾಯಿಸಬೇಕು" ಎಂದು ಓಡಿದನು.

ಸಂಜೆ ಆಡುವಾಗ ಬಿಸ್ಕುಟು ಅಂಬೋಡೆ ಇತಿಹಾಸವನ್ನು ನಮಗೆ ಹೇಳಿದನು. ಅವನಿಗೆ ಮಾಳ ಪೈ ಹೋಟಲೆಂದರೆ ಪ್ರಾಣ. ಅಲ್ಲಿಗೆ ಹೋಗುವಾಗ ಬಿಸಿ ಬಿಸಿ ಅಂಬೋಡೆ ಕಾಯಿಸುತ್ತಿದ್ದರು. ಇವನಿಗೂ ಹಸುವಾಗಿತ್ತು. ಮತ್ತೇನು? ಮಾಡಿದ ೫೩ ಅಂಬೊಡೆಗಳು ಮಸಲ್ ಮಾಧುವಿನಿಂದ ಯಜ್ಞವಾದುವು.

ಇನ್ನೊಂದು ರಾತ್ರಿ. ಊಟವಾಗಿ ಬೆಳದಿಂಗಳಲ್ಲಿ ನಾವು ಊರ ಮೈದಾನಿಗೆ ಸಂಚಾರಕ್ಕೆ ಬಂದಿದ್ದೆವು. ಅಲ್ಲಿಗೆ ದೂರದಿಂದ ನಮ್ಮ ರಾಮಯ್ಯ ಮಾಸ್ತರರು ಬಂದರು. ರಾಮಯ್ಯ ಮಾಸ್ತರರಿಗೆ ನಾವೆಲ್ಲ ಬೇಕಾದವರು. ಹೀಗಾಗಿ "ಓಹೋ ಮಾಸ್ತರರ ಸವಾರಿ ಎಲ್ಲಿಗೆ?" ಎಂದು ಕೇಳಿದೆವು. ಮಾಸ್ತರರು 'ಛೇ, ಮಳೆಗಾಲ ಬಂದಿತು. ಕಟ್ಟಿಗೆಯಿಲ್ಲದೆ ಒದ್ದಾಡುತ್ತೇನೆ' ಎಂದರು. ಕೂಡಲೆ ಮಾಧುವಿನ ಬುರುಡೆಯ ಮಾಂಸ ಖಂಡ ಕೆಲಸ ಮಾಡತೊಡಗಿತು. "ಬೆಳಗಾಗುವುದರೊಳಗೆ ಒಂದು ಗಾಡಿ ಕಟ್ಟಿಗೆಯನ್ನು ನಿಮ್ಮ ಅಂಗಳದಲ್ಲಿ ಸುರಿದರಾಯಿತಲ್ಲ" ಎಂದನು.

ನಮ್ಮೂರಿನಿಂದ ಮೂರು ಮೈಲಿಗೆ ಒಂದು ಸರಕಾರಿ ಮೈದಾನು. ಅಲ್ಲಿ ಹದಿನೈದು ದಿವಸದ ಹಿಂದೆ ಶಿವರಾತ್ರಿಯ ಗಾಳಿಗೆ ಒಂದು ಧೂಪದ ಮರವು ಮುರಿದಿತ್ತು. ಅದನ್ನು ಕಂಡ ನೆನಪು ಮಾಧುವಿಗೆ. "ಹೋಗಿ ಅದನ್ನು ತರುವ" ಎಂದನು. ನಾವೂ ಹೊರಟೆವು. ನಾವು ಹೊರಟ ಹಾದಿಯಲ್ಲಿ ಯಾರದೋ ಗಾಡಿಯನ್ನು ರಸ್ತೆಯ ಬಳಿ ಬಿಟ್ಟು

ಹೋಗಿದ್ದರು. ಗಾಡಿ ಕಂಡು ನಾನು "ಅರೇ, ಗಾಡಿ ರೆಡಿಯಿದೆ. ಎತ್ತು ಮಾತ್ರ" ಎಂದೆ. ಹೀಗೆಂದದ್ದೇ ತಡ ಗಾಡಿಗೆ ಮಾಧು ಕೈಕೊಟ್ಟ. "ಯಾರ ಗಾಡಿ?" ಎಂದು ನಾವು ಕೇಳಿದೆವು. "ಅದು ನಮ್ಮ ಅಮ್ಮ ದೆಯ ಗಾಡಿಯಲ್ಲವೆ?" ಎಂದ.

"ಅಲ್ಲದಿದ್ದರೆ?"

"ಅಲ್ಲದಿದ್ದರೇನು? ನಾವು ಗಾಡಿಯನ್ನು ತಿನ್ನುತ್ತೇವೆಯೆ?"

ಸರಿ. ಗಾಡಿಗೆ ಅವನೇ ಎತ್ತು. ನಾವು ಅದನ್ನು ಏರಿದುದೂ ಉಂಟು ಎಳೆದುದೂ ಉಂಟು. ಸರಿ ೧೨ ಗಂಟೆ ರಾತ್ರಿಗೆ ಗಾಡಿಯನ್ನು ಅಲ್ಲಿಗೆ ಒಯ್ದೆವು. ಎಲ್ಲಾ ನಿರಾಶೆ—ಮರವು ಅಲ್ಲಿರಲಿಲ್ಲ.

"ಎಂಥಾ ವ್ಯಾಪಾರ ನಿನ್ನದು? ಎಲ್ಲಿ ನೋಡಿದ್ದೆ ಮರವನ್ನು? ಎಲ್ಲಿ ಬಂದಿದ್ದೆ?" ಎಂದು ನಕಲಿ ಮಾಡಿದೆವು. ಅವನಿಗೆ ಸಿಟ್ಟು ಬಂದಿತು. ಒಬ್ಬನೇ ಗಾಡಿಯನ್ನು ಎಳೆದುಕೊಂಡು ಮುಂದರಿದು ಹೋದನು. ನಾವೂ ಹೊರಟೆವು. "ಯಾರೂ ಬರುವುದು ಬೇಡ" ಎಂದನು. ನಾವೂ ನೋಡುವಾ ಎಂದು ಅದೇ ಹಾದಿಯ ಬಳಿ ಹರಟುತ್ತ ಕುಳಿತೆವು. ಎರಡು ತಾಸಿನ ಅವಧಿಯಲ್ಲಿ ಗಾಡಿಯಲ್ಲಿ ಒಡೆದ ಕಟ್ಟಿಗೆಯನ್ನು ತುಂಬಿಸಿ ಕೊಂಡು ಮಾಧು ಸವಾರಿ ಉಸಿರು ಬಿಡುತ್ತ ಬಂದನು. "ಎಲ್ಲಿಂದ ಕದ್ದೆ ಮಹರಾಯ?" ಎಂದೆವು ನಾವು. ಮಾಧುವು ಉಸಿರು ಬಿಡಲಿಲ್ಲ.

ಒಂದೇ ಓಟ. ಮೂರು ಮೈಲಿನದು. ನಮ್ಮ ರಾಮಯ್ಯ ಮಾಸ್ತರರ ಅಂಗಣದಲ್ಲಿ ನಾವು. ರಾತ್ರೆ ಸುದ್ದಿ ಹೇಳಿದೆ. ಅಲ್ಲಿ ಕಟ್ಟಿಗೆಯನ್ನು ಇರಿಸಿದೆವು. ಅಲ್ಲಿಗೇ ಮುಗಿಯಲಿಲ್ಲ ಪೀಡೆ. ಗಾಡಿಯನ್ನು ಮರಳಿ ಅಲ್ಲಿ ಇರಿಸಬೇಡವೆ? ಅಷ್ಟು ಮಾಡಿ ಬರುವಾಗ ನಮ್ಮ ಅವನ ಹೆಣಗಳು ಹಣ್ಣಾಗಿ ಹೋಗಿದ್ದುವು. ಬೆಳಗಿನ ಝಾವ. "ಥೂತ್, ಹಾಳು ಹಸಿವಾಗು ತ್ತದೆ. ಮಾಸ್ತರರನ್ನು ಎಬ್ಬಿಸಿ ಇಷ್ಟು ಅವಲಕ್ಕಿ ಕೇಳುವ" ಎಂದನು. ಕೊನೆಗೆ ಬೇಡವೆಂದು ಅವನಿಗೆ ತೋರಿತು. ಊರಿನ ಕೆರಗೆ ಹೋದೆವು.

ಮುಂಜಾನೆಯ ಸ್ನಾನ! ಮಾಧು ಸ್ನಾನ ಬಿಟ್ಟು ಮಗ್ಗುಲಿನ ಸೌತೆ ಹಿತ್ತಿಲನ್ನು ನುಗ್ಗಿ, ನಾಲ್ಕು ಸೌತೆಕಾಯಿಗಳನ್ನು ಜಾರಿಸಿ ತಂದನು. ತಿಂದಾಯಿತು, ಸ್ನಾನವಾಯಿತು.

ಮರುದಿನ ಸಂಜೆ ಕಟ್ಟಿಗೆಯ ಇತಿಹಾಸವನ್ನು ಹೇಳಿದನು. "ಕಟ್ಟಿಗೆ ಎಲ್ಲಿಂದೆಂದು ಗೊತ್ತಾಗಲಿಲ್ಲವೆ? ನಿನ್ನೆ ಹೇಳಿಲ್ಲವೆ, ಎಲ್ಲ ಭಿಕನಾಸಿಗಳು ಸೇರಿ, ಮೇಲು ದೇವಸ್ಥಾನದ ಹತ್ತಿರ ಹೋಳಿ ಮಾಡಲು ಕಟ್ಟಿಗೆ ಹಾಕಿ ಹೋಗಿದ್ದರು. ಅವರು ಬರುವುದರೊಳಗಾಗಿ ಸಫೇತು ಮಾಡಿದೆ. ದೇವರಿಗೆ ಅದೆಲ್ಲಾ ಶೋಕು ಯಾಕೆ? ರಾಮಯ್ಯ ಮಾಸ್ತರರಿಗೆ ಒಂದು ತಿಂಗಳಿಗಾದರೂ ಸಾಕು" ಎಂದನು. ನಮಗೆಲ್ಲಾ ನಮ್ಮ ಹೊಟ್ಟೆ ಹುಣ್ಣಾಯಿತು.

*　　*　　*　　*

ಇಂತಹ ವಿಚಿತ್ರ ಚಿತ್ರಗಳಿಂದ ತುಂಬಿದ ಮಾಧುವಿನ ಜೀವನ. ಪ್ರಥಮ ಅಂತು ಖಾಡಾ ಖಾಡಿ ಜೀವನ ಅವನದು. ನಮ್ಮ ಎಮೆಚ್ಯೂರು ನಾಟಕ ಮಂಡಳದ ಮೆಂಬರನು ಅವನೊಬ್ಬ. ಅವನಿಗೆ ಒಂದೊಂದು ಪಾರ್ಟನ್ನು ಕೊಡುತ್ತಿದ್ದೆವು. ಅವನಿಲ್ಲದಿದ್ದರೆ ನಮ್ಮ ಸ್ಟೇಜನ್ನು ಕಟ್ಟುವವರು ಯಾರು? ಹೀಗೆ ಕೆಲವು ದಿವಸ ಕಳೆಯಿತು. ಒಂದು ದಿವಸ ಅವನಿಗೊಂದು ರಾಜಪಾರ್ಟನ್ನು ಕೊಟ್ಟು ಕೆಟ್ಟಿತು. ಎಲ್ಲರೂ ಅವನ ಪಾರ್ಟು ಭರ್ಜರಿಯಾಗಿತ್ತು ಎಂದರು. ಅಂದಿನಿಂದ ಯಾಕೋ ತಿಳಿಯದು ಮಸಲ್ ಮಾಧುವಿನ ಬಣ್ಣ ಬೇರೆಯಾಯಿತು. ಅವನು ಆಕ್ಟರ ಮಾಧು ಎನಿಸಿದನು. 'ತನಗೆ ಮಿದುಳಿದೆ' ಎಂದು ಅವನಿಗೆ ಅನುಭವವಾಯಿತೋ ಏನೋ. ಅಂದಿನಿಂದ ಉಬ್ಬಿಸಿದರೂ ಒಂದೇ ಅಟ್ಟಕ್ಕೇರಿಸಿದರೂ ಒಂದೇ— ಕೆಲಸ ಮಾಡಲು ಆಲಸ್ಯ. ಹಾಗೆ ಕೆಲಸಮಾಡುವುದು ಪ್ರತಿಷ್ಠೆಗೆ ಕಡಿಮೆಯೆಂದು ತಿಳಿದನು.

ಈಗ ಎಷ್ಟೋ ವರ್ಷವಾಯಿತು. ಮಾಧುವು ಜೀವನದ ಮೂರನೆಯ ಅಂತಕ್ಕೆ ಕಾಲಿರಿಸಿದ್ದಾನೆ. ಆ ಟನ್ನು ಶರೀರವೂ ಇಲ್ಲ, ಕಲ್ಲನ್ನು ಕರಗಿ

ಸುವ ತಾಕತ್ತೂ ಇಲ್ಲ, ಎದೆಗಾರಿಕೆಯೂ ಇಲ್ಲ. ಮೊದಲು ಸುಳ್ಳು ಹೇಳುವುದೆಂದರೆ ಹೇಡಿತನವೆಂದು ತಿಳಿಯುತ್ತಿದ್ದವನು, ಈಗ ಅದು ನಿಜವಾದ ಜಾಣತನದ ಲಕ್ಷಣ ಎಂದು ತಿಳಿಯ ತೊಡಗಿದ್ದಾನೆ. ಜೀವನದ ಇತಿಹಾಸ, ರಂಗು--ಅದೂ ಬದಲಿಸಿದೆ. ಕೇಳಿದ್ದಕ್ಕೆಲ್ಲಾ ವೈರಾಗ್ಯ ಹೇಳುತ್ತಾನೆ, 'ಏನು ಮಾಡಿದರೇನು ಸಾಯುವ ಶರೀರಕ್ಕೆ' ಎಂದು. ಬಾಲ್ಯದ ಗೆಳೆಯರಾದ ನಾವು, ಸಾರ್ವಜನಿಕ ವಂತಿಗೆಯಿಂದ ಅವನಿಗೊಂದು ಖಾದಿ ಹಚ್ಚಡ ಹೊದೆಯಿಸುವುದೊಂದು ಉಳಿದಿದೆ.

ಇನ್ನೂ ಮಾಧುವಿನ ಈಗಣ ಪ್ರೇತಶರೀರವನ್ನು ಕಂಡರೂ 'ಇದೇ ಉಬ್ಬಿ ಮುಂಚಿನ ಗೋಮಟಾಕೃತಿ ಯಾಕೆ ಬರಕೂಡದು' ಎಂಬ ಆಸೆ ಬರುವುದು. ಅವನ ಜೀವನದ ಪರಿವರ್ತನೆಯಿಂದ ಅವನಿಗೊಂದು ನಷ್ಟವೆಂದು ತೋರಲಾರದು--ಆದರೆ, ಅಂಥವನ್ನು ಕಂಡು ಉಕ್ಕುವ ತಾರುಣ್ಯಕ್ಕೆ ಈ 'ಮೂರ್ತಿ' ಮಾಯವಾದುದು ಮಹಾನಷ್ಟವೇ ಸರಿ.





# ಆಶಾವಾದಿ ಅಣ್ಣಪ್ಪಯ್ಯ

ಅಣ್ಣಪ್ಪಯ್ಯನಿಗೆ ನೋಡು ನೋಡುತ್ತಿರುವಂತೆಯೇ ಅರವತ್ತರ ಮೇಲೆ ಆರು ವರ್ಷ ಕಳೆಯಿತು. ಅಣ್ಣಪ್ಪಯ್ಯನಿಗೆ ವಯಸ್ಸಾಯಿತು, ಮುದಿತನ ಬಂದಿತು—ಎಂದು ನಾವೆಲ್ಲ ಅಂದರೂ ಅವರ ಯೋಚನೆಯಂತೆ ಅವರು ಕನಿಷ್ಟ ಇನ್ನು ಮೂವತ್ತು ವರುಷವಾದರೂ ಬದುಕುತ್ತಾರಂತೆ. ಅವರ ಧೈರ್ಯವೆಂದರೆ ಅವರ ಆರೋಗ್ಯದಲ್ಲಿ. ಆರೋಗ್ಯ ಬಿಡಿ–ಅದೃಷ್ಟ ಇದ್ದ ಹಾಗೆ ಆಗುತ್ತದಂತೆ. ಅವರ ತಲೆ ಕೂದಲು ಉದುರದೆ ಉಳಿದ ಮುಟ್ಟಿಗೆ ಬೆಳ್ಳಂ–ಬೆಳ್ಳಿಯಂತಿದೆ, ಹಲ್ಲು–ಮೂರರಲ್ಲಿ ಒಂದಂಶವು ಶಿಲ್ಕು ಉಳಿದಿದೆಯಷ್ಟೆ. ಆದರೂ ಅವರಿಗೆ ಧೈರ್ಯ, ತಾನು ಇನ್ನೊಂದು ಮೂವತ್ತು ವರುಷವಾದರೂ ಬದುಕಿ ಉಳಿದೇನು ಎಂದು. ಬದುಕಿ ಮೆರೆಯುವ ಆಸೆ ಅವರಿಗೂ ಇಲ್ಲ. ಇದ್ದು ಮಾಡುವುದೇನು?—ಎಂದು ಅವರೇ ಅನ್ನುತ್ತಾರೆ. ಆದರೆ ಕರ್ಮ–ಅವರ ಜಾತಕದಲ್ಲಿ ಸರಿಯಾಗಿ ೧೦೦ ವರುಷ ಆಯುಷ್ಯ ಬರೆದಿದೆಯಂತೆ. ಹೀಗೆ ಬ್ರಹ್ಮನು ಖುದ್ದಾಗಿ ಅವರ ಹಣೆಯ ಮೇಲೆ ಬರೆದಿರುವಾಗ ಬಂದ ಆಯುಷ್ಯ ಅನುಭವಿಸದೆ ಉಂಟೇ? ಏನಾಗುವುದೋ ಆಗಲಿ–ಎನ್ನುವುದು ಅವರ ಸ್ವಭಾವ.

ವಯಸ್ಸಾದ ಅಣ್ಣಪ್ಪಯ್ಯನವರೊಡನೆ ನನಗೆ ಪರಿಚಯವಿದ್ದರೂ ಸಲಿಗೆಯಿಲ್ಲ. ನಾನು ಅವರೊಡನೆ ಮಾತನಾಡುವುದನ್ನು ಕಡಿಮೆ ಮಾಡಿಲ್ಲ. ಆದರೆ ನನ್ನ ವಿಚಾರ ಅವರಿಗೆ ತಿಳಿದುದು ಕಡಿಮೆ—ಅವರ ವಿಚಾರ ನನಗೂ ಅಷ್ಟೇನೆ ತಿಳಿದಿರಬಹುದು.

   

ಅವರ ವಿಷಯ ನನಗೆ ತಿಳಿದಿರುವುದೆಂದರೆ ಅವರ ಮಗ ರಾಮು ವಿಚಾರ. ರಾಮು ಮತ್ತು ನಾನು ಸಹಪಾಠಿಗಳು; ಅಂದರೆ--ಜತೆಯಲ್ಲಿ ಓದಿದವರು. ಓದಿ ಪಾಸಾದವರಲ್ಲ. ಪಾಸು ಅಂದರೆ--ಅದೃಷ್ಟ ಎಂದು ಅಣ್ಣಪ್ಪಯ್ಯ ಒಮ್ಮೆ ಹೇಳಿದ್ದರು. ಅದು ರಾಮು ಫಿಫ್ತ್ ಫಾರ್ಮು ಫೈಲಾದಾಗ. ಪರೀಕ್ಷೆಗೆ ಹದಿನೈದು ದಿವಸದ ಮೊದಲು ನಾನು ಅವರಲ್ಲಿಗೆ ಹೋಗಿದ್ದೆ. ಅವರಿಗೆ ಮಾತನಾಡಲು ಜನರು ಸಿಕ್ಕಿದರೆ ಸಾಕು. ನನ್ನನ್ನು ಕಂಡು "ಯಾರು, ನೀನೆ! ರಾಮುವನ್ನು ನೋಡಲಿಕ್ಕೆ ಬಂದೆಯಾ! ಅವನು ಅಜ್ಜಿಯ ಮನೆಗೆ ಹೋಗಿದ್ದಾನೆ"--ಎಂದರು.

"ಹಾಗಾದರೆ ರಾಮು ಇಲ್ಲವೇ?"

"ಹುಡುಗಾ, (ಅಂದರೆ ನಾನು) ನಿನಗೆ ನಮ್ಮ ರಾಮು ವಿಚಾರ ಗೊತ್ತಿದಯಲ್ಲ. ಚೆನ್ನಾಗಿಲ್ಲವೇ ಅವನು? ನೋಡು ಅವನ ವಿದ್ಯಾರೇಖೆಯಂತೂ ಒಂದು ಅಂಗುಲ ದಪ್ಪವಾಗಿ ಬಿದ್ದಿದೆ. ಆಯುಷ್ಯರೇಖೆ ನನಗಿಂತ ಬಲವಾಗಿದೆ. ಅವನು ಕ್ಲಾಸಿನಲ್ಲಿ ಹುಷಾರಿಯಲ್ಲವೇ?"

"ಇದ್ದಾನಪ್ಪ. ಏನೋ ಲೆಕ್ಕದಲ್ಲಿ........"

"ಇಲ್ಲ. ಲೆಕ್ಕ ಪಕ್ಕದಲ್ಲಿಲ್ಲ ಅವನು ಹುಷಾರು ಇರಬೇಕು. ಏನೋ ನೋಡು, ರಾಮಚಂದ್ರನ ಪೂಜೆ ಮಾಡುವವನು ನಾನು. ದೇವರು ಅನುಗ್ರಹಿಸಿದ್ದಾನೆ. ಅವನು ಈ ವರುಷ ಪಾಸಾಗಿ, ಒಂದು ಮೆಟ್ರಿಕ್ಕು ಆದರೆ, ಮುಂದೆ ಒಂದು ಬಿ.ಎ. ಮಾಡಿಸಬೇಕೆಂದಿದೆ. ದೇವರು ನಡೆಯಿಸಬೇಕು."

"ನನಗೆ ಸಮಯವಾಯಿತು, ಹೋಗಲೇ?"

"ನಿಲ್ಲು, ಏನು ಪ್ರಪಂಚ ತಲೆಕೆಳಗೆ ಆಗುತ್ತದೆ. ನನ್ನ ರಾಮುವಿಗೆ ಒಂದು ಮದುವೆ ಮಾಡಿಸುವ ಎಂದಿದ್ದೇನೆ. ನಮ್ಮ ಕೆಳಗಿನ ಮನೆಯವರ ಮಗಳು. ಜಾತಕವೂ ಕೂಡಿ ಬರುತ್ತದೆ. ಹುಡುಗಿ ಎಂದರೆ ಪ್ರತ್ಯಕ್ಷ ಲಕ್ಷ್ಮೀದೇವಿ. ಏನೋ ದೇವರು ಅದೇ ಹುಡುಗಿಯನ್ನು ಅವನ ಹಣೆಯ ಮೇಲೆ ಬರೆದ ಹಾಗೆ ಕಾಣುತ್ತದೆ" ಎಂದರು.

ಅಷ್ಟರಲ್ಲಿ ಅವರ ಮಡದಿ ನಾಗಮ್ಮ ಬಂದಳು. ಬಂದವಳೇ "ಇವತ್ತು ಸುಬ್ಬಕ್ಕ ಬಂದು, ತಮ್ಮ ಮಗಳ ಮದುವೆಗೆ ಬರಬೇಕು ಎಂದು ಹೇಳಿ ಹೋದಳು" ಎಂದಳು.

ಆ ಮೇಲೆ ನನಗೆ ತಿಳಿಯಿತು; ಇವರ ಮಗನಿಗೆಂದು ಎಗೆಸಿದ ಲಕ್ಷ್ಮೀದೇವಿಗೇನೆ ಈ ಲಗ್ನ ನಿಶ್ಚಯವಾದದ್ದು.

* * * *

ಇನ್ನೊಮ್ಮೆ ನಾನು ರಜೆಯಲ್ಲಿ ಅವರ ಮನೆಗೆ ರಾಮುವಿನ ಜೊತೆಯಲ್ಲೇ ಹೋಗಿದ್ದೆ. ಅದೇ ವರುಷ ರಾಮು ಫಿಫ್ತ್ ಫಾರ್ಮಿನಲ್ಲಿ ನಾಪಾಸಾದುದು. ರಾಮುವಿನ ವಿಷಯ ನನಗೆ ಚೆನ್ನಾಗಿ ಗೊತ್ತು. ರಾಮುವಿಗೆ ಪುಸ್ತಕವೆಂದರೆ ಬೇಸರ; ಶ್ರಮವೆಂದರೆ ಆಗದು. ಸುಖವಾಗಿ ಬೆವರು ಸುರಿಯದೆ ತೂಕಡಿಕೆಯಲ್ಲೆ ದಿವಸ ಹೋಗಬೇಕು. ಆದರೂ ಅವನ ಹಸ್ತ ಮುದ್ರಿಕೆಯಾಗಲಿ, ಜಾತಕವಾಗಲಿ, ಒಳ್ಳೇ ಸರಸ್ವತೀ ಪುತ್ರತ್ವವನ್ನು ಸೂಚಿಸುತ್ತದೆ. "ನಮ್ಮ ಮಗನು ಕಡಿಮೆ ಕಡಿಮೆ ಬಿ.ಎ., ಬಿ.ಎಲ್. ಆಗಬೇಕು. ಇದೇನೋ ದುರದೃಷ್ಟ. ಎಲ್ಲಿಯೋ ಒಂದು ಕೆಟ್ಟ ಘಳಿಗೆ ಬಂದು ಸುಳಿದಿರಬೇಕು."

* * * *

ಈಗ ರಾಮು ಫಿಫ್ತ್ ನಾಪಾಸಾಗಿ ಐದು ವರುಷಗಳಾದುವು. ಅಣ್ಣಪ್ಪಯ್ಯನ ಮನೆಯೆಲ್ಲವೂ ಕತ್ತಲಾಗಿದೆ. ಅವರ ಮಗನು—ಒಬ್ಬನೇ ಒಬ್ಬನಾದ ರಾಮುವು ಗತಿಸಿ ಇಂದಿಗೆ ಎರಡು ವರುಷವಾಯಿತು. ಅವರ ಮಡದಿಯು ಯಾರೊಡನೆಯೂ ಮಾತನಾಡುವುದಿಲ್ಲ. ನಾನೆಲ್ಲಾದರೂ ಅವರ ಮನೆಗೆ ಹೋದರೆ ಹಿಂದಿನ ಸ್ಮರಣೆಯಿಂದ ನನ್ನನ್ನು "ರಾಮು ಬಾ" ಎಂದು ಮಾತನಾಡಿಸುತ್ತಾಳೆ. ನಾನು ಅಣ್ಣಪ್ಪಯ್ಯನವರ ಬಳಿಗೆ ಹೋದರೆ ಅವರ ರೀತಿಯೆ ಬೇರೆ. ಇದು ತನಕ ಅವರು ಮಡಿದ ಹುಡುಗನ ವಿಷಯ ಮಾತನಾಡಲಿಲ್ಲ. ಬೇರೆ ಏನಾದರೂ ವಿಷಯವನ್ನೆತ್ತಿ ಮಾತ

ನಾಡುತ್ತಾರೆ. ಸ್ವತಃ ಅವರಿಗೇನೆ ಜಾತಕ ನೋಡಲು ಬರುತ್ತದೆ: ಒಮ್ಮೆ ನನ್ನ ಜಾತಕವನ್ನು ತರಿಸಿಕೊಂಡು "ಭೇಷ್, ನಮ್ಮ ರಾಮುವಿನ ಜಾತಕದಂತಿದೆ" ಎಂದರು.

ನನ್ನ ಎದೆ ಧಸಕ್ಕೆಂದಿತು.

ಅವರ ಮಡದಿ ನಾಗಮ್ಮ ಬಳಿಯಲ್ಲಿ ನಿಂತವರು "ಅಯ್ಯೋ ನಿಮ್ಮ ಜಾತಕ ನೋಡುವುದು ಸಾಕು! ನಮ್ಮ ಹಣೆಯ ಮೇಲೆ ಮಣ್ಣು ಬರೆದಿತ್ತು—ಜಾತಕ ಹಿಡಿದು ಆ ಮಣ್ಣೋ ಚಿನ್ನವೆಂದಿರಿ" ಎಂದಳು.

ಅಣ್ಣಪ್ಪಯ್ಯರಿಗೆ ನಗು ಬಂದಿತು. ಕೊನೆಗೆ ಹೆಂಡತಿಯ ಅಳು ಮೋರೆಯನ್ನು ನೋಡಿ ನನ್ನನ್ನುದ್ದೇಶಿಸಿ "ಮಗೂ ಅವಳಿಗೆ ಇಷ್ಟು ವಯಸ್ಸಾದರೂ ಬುದ್ಧಿ ಬರಲಿಲ್ಲ. ರಾಮುವಿಗಾಗಿ ಅಳುತ್ತಾಳೆ. ಯಾರು ಚಿರವಂತೆ, ಅವಳ ಹಣೆಯಲ್ಲಿ ಪುತ್ರಯೋಗ ಖಂಡಿತವಾಗಿ ಇದೆ. ಸಾಯುವ ತನಕ ಬರೆದಿದೆ. ತಪ್ಪಿಸುವವರಾರು?" ಎಂದನು.

ಹೆಂಡತಿ, ಗತಿಸಿದ ಮಗನಿಗಾಗಿ ಅಳುತ್ತಾಳೆ, ಇವರು ಕನಸಿನ ಸ್ವರ್ಗ ಕಂಡು ಸಮಾಧಾನ ಹೇಳುತ್ತಲಿದ್ದಾರೆ.

* * * *

ಬಹಳ ಸಮಯ ಕಳೆದಿದೆ. ಮಳೆಗಾಲ ದೂರವಾಗಿ ಊರಿನ ಅಗೆ ಅಡಿಗಳೆಲ್ಲ ಕರಟಿ ಹೋಗಿವೆ. ಎಲ್ಲ ರೈತರೂ ನೀರಿಗಾಗಿ ಹಾತೊರೆದಿದ್ದಾರೆ. ಅಣ್ಣಪ್ಪಯ್ಯನವರು ಮನೆ ಜಗುಲಿಯ ಮೇಲೆ ಕುಳಿತುಕೊಂಡಿದ್ದರು. ಅಲ್ಲಿಗೆ ಅವರ ಒಕ್ಕಲು ಬಂದು "ಸ್ವಾಮಿ, ಬೀಜವಿದೆಯೆ? ಅಗೆಯೆಲ್ಲಾ ಸುಟ್ಟು ಧ್ವಂಸವಾಯಿತು. ಇನ್ನು ಈ ವರುಷ ಮಣ್ಣು ತಿಂದರೆ ಸೈ" ಎಂದನು.

ಅಣ್ಣಪ್ಪಯ್ಯನವರು "ನಿನಗೆ ಮರುಳೇ, ಈ ವರುಷ ಚಂದ್ರನು ಬಲವಾಗಿದ್ದಾನೆ. ಯುಗಾದಿ ಫಲದಲ್ಲಿ ಹೇಳಿದೆ. ಇನ್ನಿಲ್ಲದಂಥ ಬೆಳೆಯಿದೆಯೆಂದು" ಎಂದರು.

ಅನಂತರ ನನಗೆ ತಿಳಿದ ವಿಷಯವೆಂದರೆ—ಬಂದುದು ಬರಗಾಲ ವೆಂದು. ಅಣ್ಣಾಪ್ಪಯ್ಯನವರೇ ಎಷ್ಟೋ ಬಡಬಗ್ಗರಿಗೆ ಒಂದು ದಿವಸ ಗಂಜಿ ಮಾಡಿಸಿ, ಅದಕ್ಕೆ ಬೆಲ್ಲ ಸೇರಿಸಿ ಬಡಿಸಿ ಸಂತೋಷ ಪಡಿಸಿದ್ದರು.

ಅವರ ಜೀವನವೆಂದರೆ ದುಃಖದ ಬುಗ್ಗೆಯೆಂದು ನನಗೆ ತೋರು ತ್ತಿತ್ತು. ಆದರೆ ಅಣ್ಣಾಪ್ಪಯ್ಯನವರ ಬಾಯಿಂದ ಈ ತನಕ 'ನಿರಾಶೆ'ಯ ಮಾತನ್ನು ನಾನು ಕೇಳಲಿಲ್ಲ. ಹಿಂದಿನ ಉದಾಹರಣೆಗಳನ್ನೆತ್ತಿ ಹಿಡಿದು ಅವರೊಡನೆ ವಾದಿಸಿದರೆ "ನಿನಗೆ ಮರುಳು, ಅದೆಲ್ಲ ಹೀಗಾಯಿತೆಂದು ಇದು ಹಾಗಾಗುತ್ತದೆಯೆ?" ಅನ್ನುವರು.

"ಅದು ಏಕೆ ಹಾಗಾಯಿತು?"

"ಆಯಿತಪ್ಪ. ಅವನ ಇಚ್ಛೆಯಲ್ಲವೆ ಮುಖ್ಯ—ಆದರೆ ಜಗತ್ತನ್ನು ಸರಿಯಾಗಿ ನಡೆಯಿಸದಿದ್ದರೆ ಅವನ ಮಾನವೇ ಅಲ್ಲವೆ ಹೋಗುವುದು!" ಎನ್ನುತ್ತಿದ್ದರು.





# ಬೇಟೆ ಬಂಡ್ಯಪ್ಪನವರು

ಈಗಿನ ದಿವಸಗಳೇ ಶಿಖಾರಿ ದಿವಸಗಳು. ಮನುಷ್ಯರು ಮನುಷ್ಯರನ್ನು ಶಿಖಾರಿ ಮಾಡುತ್ತಿರುವುದು, ಇಂದಿನ ಲಹರಿಯಾಗಿರುವಾಗ ನಮ್ಮ ಬಂಡ್ಯಪ್ಪನು ತನ್ನ ಶಿಖಾರಿ ಕೆಲಸ, ಮಿಕ್ಕ ಮೃಗಗಳ ವಿಚಾರ ಮಾಡುತ್ತಿರುವುದು ಒಂದು ವಿಶೇಷವಲ್ಲ.

ಬಂಡ್ಯಪ್ಪನು ನಮ್ಮ ನಿಮ್ಮಂತೆ ಸಾಮಾನ್ಯ ಮನುಷ್ಯನಾದರೂ ಅಸಾಮಾನ್ಯನಾಗಿ ಕಾಣಿಸುವುದೂ ಉಂಟು. ಎಷ್ಟೋ ಬಾರಿ ಬಂಡ್ಯಪ್ಪನಿಗೆ—ತಾನು ಚಿಲ್ಲರೆ ಮನುಷ್ಯನೇ, ಅಥವಾ ರಖಂವಾರಿ ಜನವೇ ಎಂಬ ಸಂಶಯವು ತೊಡಗುವುದೂ ಉಂಟು. ಅವನ ವಿಚಾರ ಪೂರ್ಣ ತಿಳಿದರೆ ನಮಗೂ ಹಾಗೆ ಎನಿಸಬಹುದು.

ಅವನ ಬಾಲ್ಯದ ಪರಿಚಯ ನನಗೂ ಇಲ್ಲ. ಅಂತು ಅವನು ತನ್ನ ಹೈಸ್ಕೂಲು ಶಿಕ್ಷಣ ಅರ್ಧ ಮುಗಿಸಿ ಹಿರಿಯರ ಪುಣ್ಯಬಲದಿಂದ ಟ್ರೈಂಡು ಉಪಾಧ್ಯಾಯನಾದ ಮೇಲೆ ನನ್ನ ಅವನ ಗುರುತು. ಗುರುತು ಆದಂದಿನಿಂದ ನನ್ನ ಅವನ ಭೇಟಿ ಹಲವು ಸಾರಿ ಆಗಿದೆ. ಅಂದಿನಿಂದ ಇಂದಿನ ತನಕ ನನಗೆ ಅವನ ವಿಷಯ ತಿಳಿದದ್ದೆಂದರೆ ಬಂಡ್ಯಪ್ಪ 'ಒಂದು ಜನ ಹೌದು' ಅಂತ. ಅವನ ಅಭಿರುಚಿ ಒಂದೆರಡಲ್ಲ. ಅವನು ಹುಟ್ಟು ಸಂಗೀತಗಾರ, ಹಾರ್ಮೋನಿಯಂ ವಾದನದಲ್ಲಿ—ಅವನ ಕೈಯ ಚಲಾಕಕ್ಕೆ ನಿಲ್ಲುವ ಹಾರ್ಮೋನಿಯಂ—ಕಡಿಮೆಯೆಂದರೂ ತಪ್ಪಲ್ಲ. ಹರಿಕಥೆ ಮಾಡಬಲ್ಲ ಕಣಿಯೂ ಹೌದು. ಎಷ್ಟೋ ಸಾರಿ ನನಗೇ ಅಸೂಯೆಯಾಗುವುದುಂಟು. ಎಲ್ಲಾ ವಿಷಯದಲ್ಲೂ ಈ ಜನ ನನ್ನನ್ನು ಸ್ಪರ್ಧಿಸುತ್ತಾ ಇದೆಯಲ್ಲಾ ಎಂದು. ಒಂದು ವಿಷಯದಲ್ಲಿ ಅವನಿಗೆ ನಾನು

ನೋತಿರುವುದೆಂದರೆ—ಬೇಟೆಯಲ್ಲಿ. ಅವನು ನನಗೆ ನೋತಿರುವುದೆಂದರೆ—ನುಡಿಯುವುದರಲ್ಲಿ.

ಬಂಡ್ಯಪ್ಪನನ್ನು ವಿಮರ್ಶೆ ಮಾಡಬೇಕಾದರೆ, ಮೆಡಿಕಲ್ ಶಾಲೆಯ ಮಕ್ಕಳ ಮುಂದೆ ಕಪ್ಪೆ ಸೀಳಿ, ಅದರ ಕರುಳು ಮಾಂಸ, ಎತ್ತಿ ಮೂಸಿ ನೋಡುವಂತೆ ನೋಡಿದರೇನೆ ಸ್ವಾರಸ್ಯ. ಅವನು ಕವಿ—ಇದು ಅವನಿಗೆ ತಿಳಿದು ಬಂದುದು ತಡವಾಯಿತಾದರೂ ತಿಳಿದುದು ಸಂತೋಷ. ಒಂದು ದಿನ ನಾನು ಬಂಡ್ಯಪ್ಪನಿರುವ ಊರಿಗೆ ಹೋಗಿದ್ದೆ. ಸಂಜೆ ಹರಟೆ ಹೊಡೆಯುತ್ತಿದ್ದಾಗ—ಬಂಡ್ಯಪ್ಪ ಇಂಗ್ಲೀಷಿನಲ್ಲಿ ಲೆಕ್ಚರಿಗೆ ತೊಡಗಿಬಿಟ್ಟ. ಹಾಯರ್ ಎಲಿಮೆಂಟರಿ ಮಾಸ್ತರನು ಈ ರೀತಿ ಲೆಕ್ಚರು ಕೊಟ್ಟದ್ದೆಂದರೆ ನನಗೆ ದಿಗಿಲು ಹಾರದಿದ್ದೀತೆ! ಕೆಲಸವು ಸಾರಿ—ಅದು ಇಂಗ್ಲೀಷೇ ಇಲ್ಲವೆ ಜರ್ಮನ್ ಭಾಷೆಯೇ ಎಂದು ಅರ್ಥ ಮಾಡಲಾರದೆ ನಾನು ತಬ್ಬಿಬ್ಬಾಗಿ ನಿಂತಿರಲು—ಅವನು 'ಅಂವರೆ ಅದರ ಅರ್ಥ ನಾನು ಸ್ವಲ್ಪ ಕನ್ನಡದಲ್ಲಿ ಎಕ್ಸಪ್ಲೆಯಿನ್ ಮಾಡುವೆ' ಎಂದು ವಿವರಿಸಿದ. ನಾನು ನೋತು 'ಹೌದಯ್ಯ ಬಂಡ್ಯಪ್ಪನವರೇ ನಿಮ್ಮ ಠೀವಿಯ ಲೆಕ್ಚರು ಕೇಳಿ ನಾನು ನೋತೆ. ನಿಮ್ಮದೊಂದು ಹರಿಕಥೆ ಯಾಗಿದ್ದರೆ ಚೆನ್ನಾಗಿತ್ತು' ಎಂದೆ. ಸಂಜೆಯಾಯಿತು, ಎಲ್ಲ ಮುಗಿಯಿತು.

ಅದೇ ರಾತ್ರಿ ನನ್ನ ದುರ್ದೈವ—ರಾತ್ರಿ ೯ ಗಂಟೆಗೆ ಬಂಡ್ಯಪ್ಪನವರ ಹರಿಕಥೆಯಿತ್ತು. ಸಂಗೀತದಲ್ಲಿ ಮಾರ್ಡರ್ನ್ ಗ್ರಾಮಫೋನ್ ಪ್ಲೇಟುಗಳನ್ನೆಲ್ಲಾ ಸೂರೆ ಮಾಡಿದ್ದರು. ಕಂದವೃತ್ತದ ರೀತಿಯಲ್ಲಿ ನಮ್ಮ ಈಗಿನ ಕವಿಗಳ ಆಧುನಿಕ ಕವಿತೆಗಳನ್ನು ನಾಚಿಸುವ ಅತ್ಯಾಧುನಿಕ ವಿಧಾನಗಳು. ಕಥಾವಿಷಯ ಅಷ್ಟೇ ಸ್ವಾರಸ್ಯದ್ದು. ಸಂಸ್ಕೃತ ಶ್ಲೋಕಗಳೂ ಇದ್ದವು. ನಮಗೆ ಹರಿಕಥೆ ಕೇಳಿ ಬೇಸರವಾದೀತೆಂತು ಯೋಚಿಸುವಷ್ಟಕ್ಕೆ ಅವರು ತಾವಾಗಿ 'ಹೀಗಿರುವಂಥಾ ಕಾಲದಲ್ಲಿ ಹರಿಕಥೆಯು ಮುಕ್ತಾಯ ವಾಯಿತು' ಎಂದರು.

ಮರುದಿನ ಅವರ ಕವಿತೆಗಳ ರಾಶಿಯನ್ನು ತೋರಿಸಿದರು. 'ದಿಸ್ ಈಜ್ ಆಲ್ ವೆರಿ ವೆಲ್ ಡನ್—ಆದರೂ ನಿಮ್ಮ ಒಪಿನಿಯನ್ ಹೇಳಿ'

ಎಂದರು. ನಾನು 'ಅವು ಮಾನವ ಕೋಟಿಗಳಿಂದ ಅವರ್ಣನೀಯವಾಗಿ ಬಣ್ಣಿಸಲ್ಪಡತಕ್ಕವು' ಎಂದು ಹೇಳಿದೆ. ಅವರ ನಿಶ್ಚಯ ಅಭಿಪ್ರಾಯ ವೆಂದರೆ—ಕನ್ನಡದಲ್ಲಿ ಸೇಕಡಾ ೨೦ ರಂತೆ ಇಂಗ್ಲೀಷ್ ಬೆರಿಕೆಯಿಲ್ಲದೆ ಭಾಷೆಗೆ ಚೆಲುವಿಲ್ಲವೆಂದು.

ಕೆಲವು ಬಾರಿ ಅವರಿಗೆ ಸ್ಫೂರ್ತಿ ಬಂದರೆ ಆ ಠೀವಿಯೇ ಬೇರೆ. 'ಬಂಡ್ಯಪ್ಪನವರೇ ಇವತ್ತು ನೀವು ಯಕ್ಷಗಾನ ಅರ್ಥ ಹೇಳಬೇಕು' ಅಂದು ಆ ರಾತ್ರಿ ಅವರ ಠೀವಿ ನೋಡಬೇಕು. ಸ್ಪೆಶಲ್ ಸಿಲ್ಕಿನ ಸ್ಪೆಶಲ್ ಕೆಂಪು ರಂಗಿನ ಅಂಗಿ ಮಾಡಿಸಿ, ಅದರ ಮೇಲೆ ಬಾಡಿಗೆ ವೆಸ್ಟಕೋಟು ಹಾಕಿ ಅರ್ಥಕ್ಕೆ ಕುಳಿತು 'ಬನ್ನಿ ನೋಡುವ, ಯಾರು ನನ್ನೆದರು ಪರಿಭವಿಸಿ ಅರ್ಥ ಹೇಳುವರು ನೋಡುವಾ' ಎನ್ನುವರು. 'ಪರಿಭವಿಸುವ' ಎಂಬ ಅವರ ಒಂದು ಶಬ್ದಕ್ಕೆ ಬೆದರಿ ಅವರ ಮುಂದೆ ಒಬ್ಬರೂ ಅರ್ಥಗಾರರು ನಿಲ್ಲಲಾರರು.

ಸಾಹಿತ್ಯ ಅಭಿರುಚಿಯಿಲ್ಲದ ಜನರಿಗೆ ಇಷ್ಟೆಲ್ಲ ರುಚಿಸದು. ಆದರೆ ಅವರ ಬೇಟೆಯ ವಿಚಾರ ಯಾರೂ ಮೆಚ್ಚಬೇಕು. ಒಂದು ದಿನ ಪ್ರಸಂಗ ವಶಾತ್ 'ಹದ್ದಿನಂತಹ ಚುರುಕು ಪ್ರಾಣಿಯಿಲ್ಲ' ಎಂದು ಬಿಟ್ಟೆ. ಆ ಸಂಜೆ ಅವರ ಊರಿನ ಶಾಲೆಯ ಮುಂದೆ ಕುಳಿತಾಗ ಒಬ್ಬ ಹುಡುಗನು ಅವಸರದಿಂದ ಬಂದು ನನ್ನೊಡನೆ 'ಸರ್, ಸರ್, ಇಗೊಳ್ಳಿ' ಎಂದನು. ಅವನ ಕೈಯಲ್ಲೊಂದು ಅರ್ಧಸತ್ತ ಗಿಡುಗವಿತ್ತು 'ಇದೇನಯ್ಯ?' ಎಂದು ಕೇಳಿದರೆ 'ಬಂಡ್ಯಪ್ಪ ಮಾಸ್ತರರು ನಿಮಗೆ ಕೊಡ ಹೇಳಿದರು. ಅವರೂ ಈಗ ಬರುತ್ತಾರೆ' ಎಂದನು. ಅಷ್ಟರಲ್ಲೇ ಒಂದು ಕೋವಿಯ ಢಂ ಕೇಳಿಸಿತು. ಐದು ನಿಮಿಷದಲ್ಲಿ ಅವರೇ ಹಾಜರು—ಒಂದು ಕೈಯಲ್ಲಿ ಒಂದು ಕೆರೆ ಹಾವು—ಇನ್ನೊಂದರಲ್ಲಿ ಒಂದು ಕಪ್ಪೆ, ಅದನ್ನು ತಂದು 'ನೀವು ಬೆಳಿಗ್ಗೆ ಗಿಡುಗನ ವಿಷಯ ಹೇಳಿದಿರಲ್ಲಾ. ದಿಸ್ ಈಜ್ ಗಿಡುಗ. ಅದು ಈ ಕೆರೆಹಾವಿನ ಎನಿಮಿ ಅಂದರೆ ವೈರಿ. ಕೆರೆ ಹಾವು ಕಪ್ಪೆಯ ವೈರಿ' ಎಂದು ವಿವರಿಸಿದರು (ಅಲ್ಲ—ಎಕ್ಸ್‌ಪ್ಲೈನ್ ಮಾಡಿದರು.) ಏನೋ

ನನ್ನ ಅದೃಷ್ಟದಿಂದ ಕೆರೆ ಹಾವು ಹಾಗು ಗಿಡುಗನ ವಿಷಯವಾಗಿ ಆ ದಿನ ಇಂಗ್ಲೀಷಿನಲ್ಲಿ ಅವರು ಹರಿಕಥೆ ಮಾಡಲಿಲ್ಲ.

ಇನ್ನೊಂದು ಸಮಯ ನಾವು ಕೆಲವರು ಕುಮಾರ ಪರ್ವತವನ್ನು ಏರಲೆಂದು ಹೋಗಿದ್ದೆವು. ಅವರೂ ಬಂದೇ ಬರಬೇಕಷ್ಟೆ. ಕೋವಿ ಹಿಡಿದು ಅಂಗರಕ್ಷಕರಾಗಿ ಬಂದರು. ಹಾದಿಯಲ್ಲಿ ಕಾಡು--ಬಿದಿರಿನ ಹಿಂಡಲುಗಳು. ನಮ್ಮ ಮಾರ್ಗದರ್ಶಿಯು 'ಇದು ಕಾಡಾನೆಗಳಿರುವ ಸ್ಥಳ' ಎಂದನು. ಅದನ್ನು ಕೇಳುತ್ತಲೆ ಅವರ ಕಿವಿ ನೆಟ್ಟಗಾಯಿತು. ಅಲ್ಲಿಯ ತನಕ ನಡೆದು, ಸೋತು, ಕಾಲನ್ನೂ ಕೈಯಲ್ಲಿ ಹಿಡಿದುಕೊಂಡು ಬರುತ್ತಿದ್ದವರು ನಮ್ಮಗಿಂತಲೂ ಮುಂಚೆ ಓಡಿ ಕೆಳಕ್ಕಿಳಿದು ಬಂದರು. ನಮಗೆ ಈ ಆತುರದ ಗುಟ್ಟು ತಿಳಿಯಲಿಲ್ಲ. ಅವರು ಬಂದವರೇ 'ಅಯ್ಯಪ್ಪ, ಬಚಾವು' ಎಂದರು.

ಇನ್ನೊಮ್ಮೆ ರಾತ್ರಿ ನಾವು ಕಾಡಿನಲ್ಲಿ ಒಂದು ಅಗ್ಗಿಷ್ಟಿಗೆ ಉರಿಸುತ್ತ ಮಲಗಿದ್ದೆವು. ಬಂಡ್ಯಪ್ಪನವರೂ ಇದ್ದರು. ನಡುರಾತ್ರಿಗೆ ಏನೋ ಕಪ್ಪೆ ಕೂಗಿದ ಸದ್ದಾಯಿತು. ಬಂಡ್ಯಪ್ಪ ಎದ್ದು 'ಕಡಿಮೆಯೋ ಕಾಟಿಯೋ?' ಎಂದರು. ಕೈಯಲ್ಲೊಂದು ಬೆಟರಿ ಇಲ್ಲದ ಟಾರ್ಚು ದೀಪ ಹಿಡಿದು ನಡುಕತ್ತಲಲ್ಲಿ ಅಲೆದು ಅದು ಸಿಗಲಲ್ಲವೆಂದು ಮರಳಿಬಂದರು. ಹಗಲೆಂದರೆ ಅವನಿಗೆ ಕಾಲೂ ಇಲ್ಲ, ಎದೆಯೂ ಇಲ್ಲ. ರಾತ್ರಿ ಬಂತೇ, ಬೆಟ್ಟವಲ್ಲ, ಕಾಡಲ್ಲ--ಹುಲಿಯಲ್ಲ, ಕಾಟಿಯಲ್ಲ.

ಇನ್ನೊಂದು ರಾತ್ರಿಯಂತೆ--ಅವರೇ ನನಗೆ ಹೇಳಿದರು. ಕುಂಬಾರ ಕಾಡಿಗೆ ಅವರು ಲೈಟು ಹಿಡಿದು ಶಿಕಾರಿಗೆ ಹೋಗಿದ್ದರಂತೆ. ಅವರ ಜೊತೆಗೆ ಅವನಷ್ಟೇ ಧೈರ್ಯಶಾಲಿ ಇನ್ನೊಬ್ಬನಿದ್ದನಂತೆ. ನಡುರಾತ್ರಿಯಲ್ಲಿ ಒಂದು ಕಡೆ ಲೈಟು ಹಾಯಿಸಿದರು--ಎರಡು ಕಣ್ಣುಗಳು. ಗುರಿಹಿಡಿದರು-ಅನಂತರ ಹೋಚನೆ ಹೊಳೆಯಿತು-'ಅದೇನು ಇದ್ದೀತು?' ಎಂದು. ಯೋಚಿಸಲಾಗಿ ಸದರಿ ಮೃಗವು ಆನೆಯೆಂದು ತಿಳಿದು ಬಂದಿತು. ಲೈಟು ನೊಂದಿತು. ಈ ಘಟನೆಯಾದ ಐದು ನಿಮಿಷದಲ್ಲಿ ಇಬ್ಬರು

ಬೇಟೆಗಾರರೂ ಆರು ಫರ್ಲಾಂಗು ದೂರದ ಕೆಸರಿನ ಕೊಳ್ಳವೊಂದರಲ್ಲಿ ಕಾಲುಸಿಕ್ಕು ಅವುಗಳನ್ನು ಎತ್ತಲಾರದೆ ನಿಂತಿದ್ದಾರೆ.

ಅದಾದ ಮೇಲೆಯೂ ಅವರು ಶಿಕಾರಿ ಬಿಟ್ಟವರಲ್ಲ. ಸಿಕ್ಕಿದರೆ ಕಾಟಿ—ಇಲ್ಲವಾದರೆ ಪೆರ್ಗುಡೆ. ಅವರಿಗೆ ಬೇಕು ಶಿಕಾರಿ. ಅವರು ಅದರ ಮಾಂಸ ತಿನ್ನುವುದಿಲ್ಲ. ಅವರ ಬಂಧುಗಳೊಬ್ಬರಿಗೆ ಅದರ ಕಂಟ್ರಾಕ್ಟು. ಇನ್ನು ಗುಂಡೇ ತಾಗದಿದ್ದರೆ—'ಸ್ವಲ್ಪ ಆಚೆ ಸರಿಯಿತು ಪ್ರಾಣಿ.' ಅದು ಅಲ್ಲೇ ನಿಂತಿದ್ದರೆ, 'ಈ ಗುಂಡು L. G. ಆಗಿದ್ದರೆ ಆಮೇಲೆ ನೋಡಬೇಕಿತ್ತು' ಎನ್ನುವರು. ಕೆಲವು ಬಾರಿ L. G. ಗುಂಡು ತರಲು ಊರಿಗೆ ಮರಳಿ ಬಂದುದೂ ಉಂಟು. ಆದರೆ ಇವರ ಪ್ರಯತ್ನವನ್ನು ಲಕ್ಷಿಸದೆ ಆ ಪ್ರಾಣಿ ಆ ಸ್ಥಳವನ್ನು ಬಿಟ್ಟು ಹೋದರೆ ಅವರೇನು ಮಾಡಿಯಾರು?

ನಿಮಗೆ ಏನಾದರೂ ಕೆಲಸವಾಗಬೇಕೆಂದರೆ—ಅಂತಿಂತಹ ಕೆಲಸವಲ್ಲ—ಹುಲಿಯ ಹಾಲು ತರುವಂತಹ ಕೆಲಸವಾಗಬೇಕಾದರೆ ಬಂಡ್ಯಪ್ಪ ಕುಳಿತಾಗ ಹೇಳಿರಿ 'ನನಗೆ ಆ ಸಭೆಯಲ್ಲಿ ಮೀಸೆ ಹೊತ್ತ ಗಂಡಸರು ಕಾಣುತ್ತಾರೆಯೋ!' ಎನ್ನಿ. ಸರಿ, ನಿಮ್ಮ ಕೆಲಸ ಆಯಿತೆಂದೇ ತಿಳಿಯಿರಿ. ಒಂದು ದಿನ ಮಳೆಗಾಲದ ಬೀಸು ಮಳೆಗೆ ಮಧ್ಯರಾತ್ರಿ, ೧೮ ಮೈಲು ದೂರದ ಪರ ಊರಿಗೆ ಹೋಗಿ, ಬೆಳಗಾಗುವುದರೊಳಗೆ ಒಂದು ಸಿಗರೇಟಿನ ಪೆಟ್ಟಿಗೆಯನ್ನು ಒಬ್ಬರ ಆಪತ್ಕಾಲದಲ್ಲಿ ಒದಗಿಸಿಕೊಟ್ಟ ಕೀರ್ತಿ ಬಂಡ್ಯಪ್ಪನದು; ಅಂದರೆ, ಹುಲಿಯ ಹಾಲು ತರುವುದು ಇದಕ್ಕೂ ಮಿಕ್ಕಿದ ಕೆಲಸವೇನು?

ಇಷ್ಟು ಅವರ ವಿಷಯ ನಾನು ಹೇಳಿ ನನ್ನ ವಿಷಯ ಅವರು ಏನು ಹೇಳಿದ್ದಾರೆ ಎಂಬುದನ್ನು ತಿಳಿಸದಿದ್ದರೆ ಅನ್ಯಾಯವಾದೀತು. 'ಮಿಸ್ಟರ್ ಕಾರಂತ ನೀವು ಮೆರಿ ಆಗಬೇಕು. ಮತ್ತೊಂದು ಕೆಲಸ—ನೀವು ಆ ಗಾಂಧಿಯ ಫ್ರೆಂಡ್ ಶಿಪ್ಪು ಬಿಡಬೇಕು. ಯೂಸಲೇಸ್ ಮೆನ್' ಎಂದು! ಮದುವೆ ಮಾಡಿಕೊಳ್ಳುವವರಿಗೆ ಆ ಗಾಂಧಿ ಕಲ್ಲು ಹಾಕುತ್ತಾನೆ ಎಂದು ಅವರಿಗೆ ಯಾರು ಹೇಳಿದ್ದರೋ ದೇವರೇ ಬಲ್ಲ.

---

# ಒಂದು (ದೊಡ) ಮಾತು

ಇದೊಂದು ಹೊಸ ಲೇಖ ಮಾಲೆ. ಲೇಖ ಮಾಲೆ ಎನ್ನುವುದಕ್ಕಿಂತ, ಸಂಭಾಷಣೆಗಳ ಸರ ಎನ್ನಬಹುದು. ಎಷ್ಟೋ ಸಾರಿ, ನಮಗೆ ಮನುಷ್ಯರೊಡನೆ ಮಾತನಾಡಿ ಬೇಸರವಾಗುವುದುಂಟು; ಇತ್ತ ಮಾತನಾಡುವ ಚಟವು ನಿಲ್ಲುವಂತಿಲ್ಲ. ಮಾತು ಬಲ್ಲವನು ಮಾತನಾಡದೆ ಸುಮ್ಮನೆ ಇರಬಲ್ಲನೆ? ಹಾಗಿದ್ದು ನನ್ನಂಥವನು—ಮಾತನಾಡದೆ ಇರುವುದು ಹೇಗೆ? ಮಾತನಾಡುವುದಕ್ಕೆ ಯಾರೂ ಅಂಜ ಬೇಕಾಗಿಲ್ಲ; ಮಾತು ಬಂದರಾಯಿತು. ಮಾತನಾಡುವ ವಿಷಯವು ಮುಖ್ಯವಲ್ಲ. ಮಾತನಾಡುವವರು ನಾವೆಂದ ಬಳಿಕ, ವಿಷಯವನ್ನು ಅನುಸರಿಸಿ ಏಕೆ ಮಾತನಾಡ ಬೇಕು - ಇದು ಮಾತುಗಾರರ ಮುಂದಿರುವ ಒಂದು ಪ್ರಶ್ನೆ.

ನಮ್ಮನ್ನು ಇತರರು ಮಾತನಾಡಿಸುವುದಾದರೂ, ಅವರಿಗೂ ಬಾಯಿಬೇಕೆಂದಿಲ್ಲ. ಎಷ್ಟೋ ಬಾರಿ, ಬಾಯಿ ಇರುವವರಿಗಿಂತ ಬಾಯಿ ಇಲ್ಲದವರು ಮಾತನಾಡುವುದು (ನಮ್ಮೂರ 'ಬಾಯಿ'ಗಳನ್ನು ಬಿಟ್ಟು) ಅಧಿಕ. ಇಂಥ ವ್ಯಕ್ತಿಗಳು (ಈ ಶಬ್ದ ಕೋಶದಲ್ಲಿ, ವ್ಯಕ್ತಿತ್ವವಿಲ್ಲವೆಂದು ಜನಸಾಮಾನ್ಯರು ತಿಳಿಯುವ ವಸ್ತು ಒಡವೆಗಳೂ ಸೇರಿವೆ) ನಮ್ಮೊಡನೆ ಬೆಳೆಯಿಸುವ ಸಂಭಾಷಣೆಯನ್ನು ಓದುಗರ ಮುಂದೆ ನಿಲ್ಲಿಸೋಣವೆಂಬುದು ನನ್ನ ಆ—ಕಾಂಕ್ಷೆ.

★ ★ ## ಮಿ। ದುಸ್ತು ಬಿನ್

ಮಂಗಳೂರಿನ ಬೀದಿಯೊಂದರಲ್ಲಿ ಒಂದು ದಿವಸ ಬಿರಬಿರನೆ ನಡೆಯುತ್ತಿದ್ದೆ. ಬೆಳಗಿನ ಮುಂಜಾವು, ಜನ ಸಂಚಾರ ವಿದ್ದಿಲ್ಲ. ನಾನು, ರಸ್ತೆ—ಇಬ್ಬರೇ ಆ ಸಮಯ ಎಚ್ಚರವಿದ್ದವರೆಂದು ತಿಳಿಯಬೇಕು. ಏಕಾಗ್ರ ಚಿತ್ತನಾಗಿ, ಯಾವ ವಿಷಯವನ್ನೂ ಯೋಚಿಸದೆ ಹಾದಿ ಗುಂಟೆ ಸಾಗುತ್ತಿದ್ದ ನನ್ನ ಕಾಲುಗಳು ಒಮ್ಮೆಂದೊಮ್ಮೆಗೇ ತಡೆದು ನಿಂತವು. ನಾನೂ ನಿಂತೆ—ಅದು ಕೇವಲ ನನ್ನ ಕಾಲುಗಳು ನಿಂತುದರಿಂದ ಎಂದು ತಿಳಿಯಬೇಡಿ. ಮೊದಲು ನಿಂತುದು—ಮೂಗು. ಏನಾಯಿತೋ ಏನೋ ಅದು ನಿಂತಿತು. ಯೋಚಿಸಿದೆ—ಬಲು ದುರ್ವಾಸನೆಯೊಂದು ನನ್ನ ಮೂಗನ್ನು ತಡೆದು ಹಿಡಿಯಿತು. ನಿಂತೆ—ನೋಡಿದೆ. ಯಾರೂ ಇದ್ದಿಲ್ಲ. ಬಲು ಸೂಕ್ಷ್ಮವಾಗಿ ಕಣ್ಣನ್ನು ಹರಿಸಲು ಬಹು ತಲ್ಲೀನವಾದ ಮಿ। ದುಸ್ತು ಬೀನು ಕಾಣಿಸಿದನು. ಮಠದ ಸನ್ಯಾಸಿಯಂತೆ ಕಾವಿ ಬಟ್ಟೆಯನ್ನು ತೊಟ್ಟು, ಸಮಾಧಿ ಅವಸ್ಥೆಯಲ್ಲಿ—ಭರತಮಾತೆಯೊಡನೆ ತನ್ಮಯ ವಾದಂತೆ ಅದು (ಅವನು) ನಿಂತಿತ್ತು (ನಿಂತಿದ್ದನು). ನನಗೆ ತಡೆಯಲಾರದ ಕೋಪ ಬಂದು ಈ ಪ್ರಸ್ತಾಪ ಪ್ರಾರಂಭವಾಯಿತು. ಇದರ ತೀರ್ಮಾನವು ಸ್ವಾಭಾವಿಕವಾಗಿ ವಾಚಕರಿಗೆ ಸೇರಿದೆಯೆಂದೂ, ಕಸದ ಬುಟ್ಟಿಗೆ ಸೇರಿಲ್ಲ ವೆಂದೂ ಈ ಮೂಲಕ ನಮೂದಿಸೋಣಾಗಿದೆ.

ನಾನು—ಅಲ್ಲವಯ್ಯ, ಇದೇನು! ದಿನಕ್ಕೊಂದು ಜಾಗ ಹಿಡಿ ಯುತ್ತೀ, ನಿನಗೆ ಗತಿ ಗೋತ್ರವೇ ಇಲ್ಲವೇ?

ದುಸ್ತು ಬಿನ್—ಗತಿ ಗೋತ್ರ ನನಗೆ! ನನ್ನ ಕಾವಿ ಬಣ್ಣ ನೋಡಿ ಹೀಗೆ ಕೇಳಿದರೆ! ಸನ್ಯಾಸಿ ಸಮಾನನಾದ ನಾನು, ಮೂರು ದಿನಕ್ಕೊಮ್ಮೆ



ಅದರೊಳಗಿಂದ ಒಂದು ಮುನಿಸಿಪಲ್ ನಾಯಿಯು ಹೊರಟು ಹೋಯಿತು.

ಯಾದರೂ ಶಾವನ್ನು ಬದಲಿಸಬೇಕೆಂದು ಸ್ಮೃತಿವಚನ ವಿರುವಾಗ—
(ಈ ವಚನ ನನ್ನಸ್ಮೃತಿಯಲ್ಲಿರಲಿಲ್ಲ)

ನಾನು—ನೀನೇನು ಅಪಹಾಸ್ಯ ಮಾಡುತ್ತೀಯಾ? ಅಲ್ಲ—ಮಕ್ಕಳ ಕಾಲಿನ ಫುಟ್ ಬಾಲಿನಂತೆ ಗಳಿಗೆಗೊಂದು ಕಡೆ, ನೀನು ಸಂಚಾರಕ್ಕೆ ಹೊರಡುತ್ತೀ. ಸ್ನಾನ ವಿಲ್ಲ ಸಂಧ್ಯಾವಂದನೆಯಿಲ್ಲ! ಶೌಚವಿಲ್ಲ—ಸುಧಾರಣೆಯಿಲ್ಲ—

ಆಕಸ್ಮಿಕವಾಗಿ ಪ್ರಾತರ್ವಂದನೆಗೆಂಬಂತೆ ದುಸ್ತು ಬೀನನು ಅಲ್ಲೇ ಉರುಳಿ ಬಿದ್ದನು. ಆದರೊಳಗಿಂದ ಒಂದು ಮುನಿಸಿಪಲ್ ನಾಯಿಯು ಹೊರಟು ಹೋಯಿತು. ನಾತವು (ಸ-ವಲ್ಲ) ಮತ್ತಷ್ಟು ಕೆದರಿತು.)

ದುಸ್ತುಬಿನ್—ನೋಡಿ ನಿಮ್ಮ ಬಾಯಿ ಸಂಧ್ಯಾವಂದನೆಯ ವಿಚಾರ ಹೇಳುವಾಗ, ಪ್ರಾತರ್ವಂದನೆ ಮಾಡುವ ಸ್ಥಿತಿಯಾಯಿತು.

ಈ ಮಾತನ್ನು ಆಡುವಾಗ ಅವನು ಕಣ್ಣೀರನ್ನು ಸುರಿಸಿದನು. ಟಪ್ಪೆಂಬಸದ್ದಾಗಿ, ಅವನ ಹೊಟ್ಟೆಯ ತಗಡು ಬಿರಿದು, ನಾಲ್ಕು ದಿಕ್ಕುಗಳಿಗೆ (ಅಷ್ಟವಿದ್ದಲ್ಲಿ ಅಷ್ಟ ದಿಕ್ಕುಗಳಿಗೂ) ಒಳಗಿನ ಕರುಳು ಮಾಂಸವೆಲ್ಲಾ ಚೆದರಿದಂತೆ ಚೆದರಿತು.

ಈ ಸಮಯದಲ್ಲಿ ಭಗವಾನ್ ಭಾಸ್ಕರನು ಉದಯಿಸಿದನು. ಮಧ್ಯ ಬೀದಿಯಲ್ಲಿ ಎದೆಯೊಡೆದು ಬಿದ್ದ ದುಸ್ತು ಬೀನು!—ಸುತ್ತು ಚೆದರಿದ ಅವನ ಪಾರ್ಥಿವ ಶರೀರದ ಭಗ್ನಾವಶೇಷಗಳು! ಜನರೂ ಸೇರಿದರು. ಅತ್ತಿತ್ತ ಸರಿಯುವವರು, ಮೂಗು ಹಿಡಿದು ಆ ಕರುಣಮಯ ದೃಶ್ಯವನ್ನು ನೋಡಲಾರದೆ ಮರಳಿದರು. ಒಬ್ಬರೂ ಅದನ್ನು ಎತ್ತಲಿಲ್ಲ. ಸಾಲದುದಕ್ಕೆ ಸರ್ಕಾರಿ ರಸ್ತೆಯಲ್ಲಿ ಬೂಟು ಪೇಂಟು ಹಾಕಿದವರು ಜಾರಿಬಿದ್ದರೆ ಅವರನ್ನು ನೋಡಿ ನಕ್ಕು ಮುಂದೆ ನಡೆಯುವಂತೆ ಹೊರಟು ಹೋದರು. ಅದರಿಂದ ನನ್ನ ಎದೆ ಕರಗಿತು. (ಈಗ ನನ್ನವಶವಿರುವುದು ಬೇರೊಂದು ಗಟ್ಟಿಯಾದ ಎದೆ. ಕರಗಿಹೋದ ಎದೆಯಿಂದ ಈ ಲೇಖ ಬರೆಯಲು ಸಾಧ್ಯವಿಲ್ಲವಷ್ಟೆ.)

ನಾನು ನಿಂತು ನೋಡಿದೆ. ಮಾತನ್ನು (ವಿನಯದಿಂದ—ಅಲ್ಲ, ಕರುಣೆಯಿಂದ) ಮುಂದುವರಿಸಿದೆ—

ನಾನು—ಅಪ್ಪಾ ನಿನ್ನನ್ನು ಸಾಯುವ ಗಳಿಗೆಯಲ್ಲಿ ಹೀಗೆ ಅಪ ಹಾಸ್ಯ ಮಾಡಿದೆನೆಂದು ಕೋಪಿಸಬೇಡ. ಇತರರಷ್ಟು ನೀಚನು ನಾನಲ್ಲ.

ಅವನು—(ಮೌನ)

ನನ್ನ ಮಾತುಗಳಿಂದ ಅವನು ಬಲು ನೊಂದಿರುವನೆಂದು ತೋರಿತು. ಆಗ ನಾನು ಅವನಿಗೆ ಧೈರ್ಯ ಹುಟ್ಟಲೆಂದು ಕಾಗದ ಪೇನುಗಳನ್ನು ಹಿಡಿದು 'ಅಣ್ಣಾ ಕೋಪಿಸಬೇಡ. ಕೋಪವು ಮಹಾಪಾಪವು. ನಿನಗಿರುವ ಈ ಕೊನೆಯ ನಾಲ್ಕೋ, ಎಂಟೋ (ಮುಂದೆ ಅದು ಎಂಟು ತಿಂಗಳ ತನಕವೂ ಮುಂದರಿಯಿತು. ಕಾರಣ ಆ ಹೆಣವನ್ನು ಮುನಿಸಿಪಾಲಿಟಿ ಯವರು ಸಾಗಿಸಲೇ ಇಲ್ಲ.) ಗಳಿಗೆಯೊಳಗೆ ನಿನ್ನ ಆತ್ಮ ಕತೆಯನ್ನು ಹೇಳು. ಅಲ್ಲ—ಮೃತ್ಯುವಾಕ್ಯಗಳನ್ನು ಉಸುರು. ಜಗತ್ತಿಗೆ ಪ್ರಚುರ ಪಡಿಸುವೆ' ಎಂದೆ.

ಆಗ ಅವನು ತುಸು ಶಾಂತಿಯನ್ನು ಪಡೆದುಕೊಂಡು ಬಲು ದೀನ ವಾಗಿ ಮಾತನಾಡಿದನು. 'ಈ ತನಕ ಇಷ್ಟು ವಿನಯದಿಂದ—ವಿನಯದಿಂ ದೇನು ಕೋಪದಿಂದಲೂ ಸಹ ಮಾತನಾಡಿಸಿದವರಿಲ್ಲ. ನೀನೇ ಈ ದಿನ ಮಾತನಾಡಿಸುತ್ತೀಯಾ? ಮನುಷ್ಯರಲ್ಲಿ ಪ್ರಥಮನು ನೀನು' ಎಂದು ಅಂದನು. ನನಗೂ ಅಂಥ ಗೌರವ ದೊರಕಿದುದು ಪ್ರಥಮಬಾರಿಗೆ.

ನಾನು—ಅಣ್ಣಾ ನಿನಗೆ ಏನು ಹೇಳಬೇಕೆಂದು ಚೆನ್ನಾಗಿ ತೋರ ಲಾರದು. ನಾನು ಯುಕ್ತವಾದುದನ್ನು ಕೇಳಿದರೆ ಹೇಳುವೆಯಾ?

ಅವನು—ಅಯುಕ್ತವಾದುದನ್ನು ತುಂಬಿಸಲು ನನ್ನನ್ನು ಸೃಷ್ಟಿಸಿ............(ಎಂದು ಕಣ್ಣೀರು ಮಿಡಿದನು)........ಆಗಲಿ.

ನಾನು—ನಿನ್ನನ್ನು ಈ ನಾಲ್ಕುವರ್ಷಗಳಿಂದ ನೋಡುತ್ತಿದ್ದೇನೆ.

ಅವನು---ನಾನು ಹುಟ್ಟಿ ಇಂದಿಗೆ ೧೬ ವರ್ಷಗಳಾದುವು. ಈ ಬೀದಿಗೆ ಬಂದೇ ಏಳುವರೆ ವರ್ಷಗಳಾದುವು.

ನಾನು---ಅದೇ, ಬಲುದೀರ್ಘ ಸಮಯದಿಂದ ನೋಡುತ್ತಿದ್ದೇನೆ. ಆದರೆ ದಿನಕ್ಕೆ ಒಂದೊಂದು ಕಡೆ ನೀನು ಕಾಣಿಸಲು ಕಾರಣವೇನು? ನಿನಗೆ ಕಾಲುಗಳಿಲ್ಲ, ಆದರೂ ಬಹಳ ಸಂಚರಿಸುತ್ತೀಯಾ........ಕೋಪಿಸ ಬೇಡ.

ಅವನು---ಅದು ನನ್ನ ತಪ್ಪಲ್ಲ. ನಾನು ಬಂದವನು ರಾಯರ ಮನೆಯ ಗೇಟಿನ ಎದುರಿಗೆ ಸ್ಥಾಪಿತನಾದೆ. ಆದರೆ ಬಹಳ ದಿವಸವಾದರೂ ನನ್ನನ್ನು ಮಾತನಾಡಿಸಿದವರಿಲ್ಲ. ಶಾಲೆಯ ಹುಡುಗರೆಲ್ಲ ಕಲ್ಲೆಸೆದು ನನ್ನ ಬೆನ್ನ ಕೀಲನ್ನು ಮುರಿಯ ತೊಡಗಿದರು. ರಾಯರ ಮನೆಯವರು ನನ್ನ ಸುತ್ತಲು ಕಶ್ಮಲ ಸುರಿಯುತ್ತಿದ್ದರು. ಅದನ್ನು ಕಂಡು ಯಾರೋ ನನ್ನನ್ನು ಎರಡನೆ ರಾಯರ ಮನೆಯ ಎದುರು ಇರಿಸಿದರು. ಒಂದು ದಿನ ಮುಂಜಾನೆ ಒಬ್ಬ ಹೆಂಗಸು ಬಂದು, ಒಂದು ಕೋಲಿನಿಂದ ನನ್ನನ್ನು ತಳ್ಳಿ ಉರುಳಿಸಿ, ನೆರೆಮನೆಯ ಎದುರು ಕೆಡೆಹಿದಳು. ಅಲ್ಲಿ ಸ್ಥಾಪಿತನಾದೆ. ಆ ಮನೆಯವರು ಮೂಗು ಮುಚ್ಚಿಕೊಂಡು ಇನ್ನೊಂದು ಮನೆಗೆ ನನ್ನನ್ನುರುಳಿಸಿದರು---ಆದರೆ ನನ್ನ ತಪ್ಪು ಅದರಲ್ಲಿ ಇಲ್ಲ. ನಾನು ನಾರುವೆ ವೆಂದು ಅವರು ಹೇಳಿದರೂ ಅವರ ಹಿತ್ತಿಲು ಬಾಗಿಲ್ಕುನಾರಿದಷ್ಟು ನಾನು ನಾರಲಿಲ್ಲ.

ನಾನು---ನಿನ್ನ ಆರೋಪ ಈ ಮನೆಯವರ ಮೇಲೆಯೇ ಏನು?

ಅವನು---ಆರೋಪವೇನು? ನಾನು ಮುನಿಸಿಪಲ್ ತೋಟಿಗಳ ಅನಾದರಕ್ಕೆ ಪಾತ್ರನಾದೆ. ಹಾದಿಯಲ್ಲಿ ಬಿದ್ದಿರುವ ಕಸ ಕಡ್ಡಿಗಳನ್ನು ಒಯ್ದುರೂ, ಬಲು ದಿನ ನನ್ನಬಳಿ ಬಂದವರಿಲ್ಲ....ಏಕೆ ಬಲ್ಲಿರಾ? ಅವರಿಗೆ ನನ್ನನ್ನು ಮುಟ್ಟಲು ನಾಚಿಕೆಯಂತೆ. ಈ ಪಕ್ಕದ ಮನೆಯ ಮಡದಿ ಯರು ನನ್ನನ್ನು ಮನೆಯ ಹಿಂದಿನ ಮನೆಯಾಗಿ ತಿಳಿದರು---ಇನ್ನೇನು ಮಾನವುಳಿಯಿತು ನನಗೆ?

ನಾನು—ನಿನ್ನನ್ನು ಯಾರೂ ಮಾತನಾಡಿಸಲಿಲ್ಲವೆ?

ಅವನು—ಹಾಗೆಂದರೆ ಅನ್ಯಾಯ. ಈಗ ನನ್ನ ಗರ್ಭ ಸೀಳಿ ಹೋದ ನಾಯಿಯೊಂದು, ಅನವರತವೂ ನನ್ನ ಆಶ್ರಯದಲ್ಲಿ ಬೆಳೆದುದು. ಹೆಚ್ಚೇನು—ರಾಯರ ಮನೆಯಲ್ಲಿ ಒಂದು ನಾಯಿ ಮರಿ ಹಾಕಿತು. ಅವರಿಗೆ ಮರಿಗಳನ್ನು ಕೊಲ್ಲಲು ಕೈ ಬರಲಿಲ್ಲ. ಅವರಲ್ಲಿ ಒಂದು, ಹೆಣ್ಣು ಮರಿಯೊಂದು ನನಗೆ ಒಪ್ಪಿಸಿದರು. ಅಲ್ಲಿಂದ ಅದರ ಸಂಸಾರವನ್ನು ಸಾಕಿದವನೇ ನಾನು!

ನಾನು—ಅಷ್ಟು ಮಾಡಿದ ನಿನಗೇ ಅದು ಇಂದು ಮೃತ್ಯುವಾಯಿತೇ?

ಅವನು—ಅದರ ತಪ್ಪೇನು ಪಾಪ, ನನ್ನ ಸಾಯುವ ಗಳಿಗೆ ಬಂದಿತು. ಇಂದು ಅತಿ ವ್ಯಥೆಯಿಂದ ನನ್ನ ಹೊಟ್ಟೆ ಬಿರಿಯಿತು.

ನಾನು—ಅಂಥ ಮಹಾವ್ಯಥೆಯಿಂದ ಈ ಮಹಾಮರಣವಾಯಿತೇ?

ಅವನು—ಅಹುದು ಮಹಾ!—ಅಲ್ಲಿ ನೋಡಿ....

ಅಷ್ಟರಲ್ಲಿ, ಹಿಂದೆ ಹೊರಟು ಹೋದ ಸದರಿ ಹೆಣ್ಣು ನಾಯಿಯು ಬಂದು, ಅಲ್ಲಿ ಬಿದ್ದ ರೊಚ್ಚಿಯನ್ನು ಕೆದರಿ ಏನನ್ನೋ ತಿನ್ನತೊಡಗಿತು.

ನಾನು—ಅಯ್ಯೋ ಪಾಪ ನಾಯಿಯೇ!

ಅವನು—ಅದನ್ನು ಬಯ್ಯಬೇಡ. ಅದಕ್ಕೆಲ್ಲಿಯ ಪಾಪ! ಅದು ಪಾಪ ಹರಿಸುತ್ತಿದೆ.

ನನಗೆ ಈ ಮಾತು ತಿಳಿಯದೆ ಹೋಯಿತು. ಮೂಕನಂತೆ ಆ ನಾಯಿಯನ್ನು ನೋಡಿದೆ. ಆ ನಾಯಿಯು ಏನನ್ನೋ ಅಲ್ಲಿಂದ ಎತ್ತಿಕೊಂಡು ಓಡಿತು. ನನಗೆ ಆತುರವಾಗಿ ನಾನೂ ಹಿಂಬಾಲಿಸಿದೆ. ಅದರ ಠಾಣೆಯನ್ನು ನೋಡಿಥೆ. ಇನ್ನೊಂದು ದುಸ್ತು ಬೇನಿನ ಬಳಿ ಹೋಗಿ ಅದು ಬಿಡಾರ ನಿಶ್ಚಯ ಮಾಡಿ ಬಂದಿತಷ್ಟೆ. ಅಲ್ಲಿಗೇ ಈ ವಸ್ತುವನ್ನು ಹೊತ್ತು

ಕೊಂಡು ಹೋದುದು. ಹೋಗಿ ನೋಡಿದರೆ—ಒಂದು ಕೈ! ಅದಕ್ಕೆ ಐದು ಬೆರಳು! ನಾಯಿಯ ಕೈಯಲ್ಲ! ಗಾಬರಿಗೊಂಡು ನಾನು ಬಂದೆ—ತಿರುಗಿ ದುಸ್ತು ಬೀನಿನಲ್ಲಿಗೇನೆ ಬಂದೆ.

ನಾನು—ಇದರ ಗೂಢವೇನು?

ಅವನು—ಅಷ್ಟು ಮೂರ್ಖನೆ ನೀನು? (ನಾನು ನೊಂದೆ) ಇದು ನನ್ನ ಇತಿಹಾಸಿನಲ್ಲಿ ನಾಲ್ಕನೆ ಬಾರಿ ಆದುದು.

ನಾನು—ಇದು ಎಂದರೆ?

ಅವನು—ಅದನ್ನು ನೋಡಿಲ್ಲವೆ? ಕೈಯನ್ನು....ಈ ಬೀದಿಯಲ್ಲಿ ಇನ್ನೊಂದು ರಾಯರ ಮನೆಯಿದೆ. ಅಲ್ಲಿನ ದಾಸಿ ನಿತ್ಯವೂ ನನ್ನನ್ನು ಉಪಚರಿಸುತ್ತಿದ್ದಳು. ನಿನ್ನೆ ರಾತ್ರಿ, ಕಸತರುವ ಬದಲು ಇದನ್ನು ತಂದು ದಬಕ್ಕನೆ ಸುರಿದಳು! ಮಳೆ ಬರುತ್ತಿತ್ತು! ಮಗು ಕೂಗಿತು! ತುಸು ಹೊತ್ತು....ಅನಂತರ ಈಗ ಓಡಿ ಹೋದ ನಾಯಿಯು ಅದನ್ನು ತನ್ನ ಹೊಟ್ಟೆಯಲ್ಲಿ ಇರಿಸಿಕೊಂಡಿತು. ನನ್ನ ನಿತ್ಯ ಕೆಲಸದ ಜತೆಯಲ್ಲಿ ಈ ಮೆಟರ್ನಿಟಿ ಆಸ್ಪತ್ರಿ ಕೆಲಸವನ್ನು ಮಾಡುತ್ತಿದ್ದೇನೆ.

ನನಗೆ ಬಹಳ ಮರುಕವಾಯಿತು. ಮೌನವಾಗಿ ನಿಂತಿದ್ದೆ. ಮಾತನಾಡುವ ಸಾಹಸವಾಗಲಿಲ್ಲ. ಅಷ್ಟರಲ್ಲಿ ಆ ನಾಯಿಯು ತಿರುಗಿ ಬಂದಿತು. ರೊಚ್ಚೆಯನ್ನು ಕೆದರಿ, ಅಲ್ಲಿಂದೊಂದು ತೀರ ಹೊಸ ಬೂಟನ್ನು (ಬೂಟ್ಸಲ್ಲ—ಏಕವಚನದ ಬೂಟು) ಒಯ್ದಿತು. ನನ್ನ ಆಶ್ಚರ್ಯ ಹೆಚ್ಚಿತು. ಅಷ್ಟು ಚಿಕ್ಕ ಮಗುವಿನ ಕಾಲಿಗೆ, ಇಂಥ ದೊಡ್ಡ, ಹೊಸ ಬೂಟು ಹೇಗೆ ಬಂದಿತೆಂದು. ಅವನಿಗೆ ನನ್ನ ಮನಸ್ಸಿನಲ್ಲಿ ಸಂಚರಿಸುತ್ತಿದ್ದ ಪ್ರಶ್ನೆ ತಿಳಿಯಿತೇನೊ.

ಅವನು—ಅದನ್ನೇನು ನೋಡುವೆ? ಇಲ್ಲಿಯ ತನಕ ಜೀರ್ಣವಾದ ಪಾಪಾಸುಗಳೆಲ್ಲಾ ನನಗೇ ಬರುತ್ತಿದ್ದುವು. ನಾಲ್ಕು ದಿನಗಳ ಕೆಳಗೆ ಒಂದು ಜತೆ ಹೊಸ ಬೂಟ್ಸು ಬಂದಿತು!

ನಾನು---ಬಂದಿತು!

ಅವನು---ಬಂದಿತು ಎಂದರೆ ಬರಬೇಕಾಗಿ ಬಂದಿತು. ಪೋಡೂರಿನವನಂತೆ---ಒಬ್ಬ ಹಳ್ಳಿಯ ಹುಡುಗ ಬಂದಿದ್ದ. ಮೈದಾನಿಗೆ ಹೋಗಿ ಒಂದು ಜತೆ ಹೊಸ ಬೂಟ್ಸನ್ನು ಖರೀದಿ ಮಾಡಿದನಂತೆ. ಇಲ್ಲಿಗೆ ಅವನ್ನು ಮೆಟ್ಟಿಕೊಂಡು ಬರುವಾಗ ಒಂದೆರಡು ತಾಸು ಸಹ ಆಗಿರಲಿಲ್ಲ. ಅದನ್ನು ಹಾಕಿಕೊಂಡು---ಅಲ್ಲ ಎಳೆದುಕೊಂಡು ಬಂದನು! ಕಳಚಿದನು. ಕಾಲು ತುಂಬ ಬೊಕ್ಕೆಯಾಗಿತ್ತು. ನಿಂತುಕೊಂಡಿರುವಾಗ---ಒಬ್ಬ ಹುಡುಗ ಅಲ್ಲಿಗೆ ಬಂದು 'ವರ್ತಮಾನ ಪತ್ರ ಬೇಕೆ?' ಎಂದು ಅವನನ್ನು ಕೇಳಿದ. ಯಾವ ಪತ್ರ ಏನು ಎಂದು ವಿಚಾರಿಸದೆ ಈ ಹುಡುಗನು ಒಂದನ್ನು ಕೊಂಡುಕೊಂಡ. ಅವನ ರೀತಿ ನೋಡಿದರೆ ನನಗೆ ತಿಳಿದಷ್ಟು ಬರಹವೂ ಅವನಿಗೆ ತಿಳಿದಿರಲಿಲ್ಲವೆಂಬುದು ಖಂಡಿತ.

ನಾನು---ಹಾಗಾದರೆ ಅದನ್ನೇಕೆ ತೆಗೆದು ಕೊಂಡನು?

ಅವನು---ಏಕೆಂದರೆ ತನ್ನ ಬೂಟ್ಸಿನ ಗೌರವ ಕಾಪಾಡಲು. ಹೋದನು. ಅದೇ ಸಂಜೆ ತಿರುಗಿ ನನ್ನ ಮಾರ್ಗವಾಗಿ ಬಂದನು! ಅವನ್ನು ಬಿಡಿಸಿ, ಕಾಲಿಗೆ ಇರಿಸಿಕೊಳ್ಳುವ ಎಂಬ ಗಳಿಗೆಯಲ್ಲಿ ಯಾರೋ--ಎದುರಾದುದನ್ನು ಕಂಡು, ಕಳ್ಳರಂತೆ ಅಂಜಿದನು. ಒಮ್ಮೆಗೇ ಏನು ತೋಚಿತೋ---ಏನೋ ಅವರೆಡನ್ನು ಕಳಚಿ ನನ್ನ ವಶಕ್ಕೆ ಒಪ್ಪಿಸಿ ಮುಂದರಿದನು. ತಿರುಗಿ ಆ ಹುಡುಗ ನನ್ನಲ್ಲಿ ಬರಲಿಲ್ಲ. ಅವನ ರೀತಿ ನೋಡಿ ನನಗೇ ಬೆರಗಾಯಿತು.

ನಾನು---ನನಗೂ ಬೆರಗಾಗುತ್ತದೆ.

ನಿಜಕ್ಕೂ ನನ್ನ ಆತುರವು ಹೆಚ್ಚಿ ಮತ್ತು ಚೀದರಿಂದ ರೊಚ್ಚಿಯನ್ನು ಪರಿಶೀಲಿಸಿದೆ. ಅದರ ಮೋಜರನ್ನು ಸಹ ಮಾಡ ಬೇಕಾಯಿತು. ಸಾರ್ವಜನಿಕ ಪರಾಂಬರಿಕೆಯ ಬಗ್ಗೆ ಅವುಗಳಲ್ಲಿ ಕೆಲವನ್ನು ಇಲ್ಲಿ ಕೊಟ್ಟಿರುತ್ತದೆ.

ಒಡೆದ ಬಳೆ ಚೂರುಗಳು....ನಾನ್ನೂರು ಕಾಗದ ಚೂರುಗಳು. (ಅವನ್ನು ಓದಿ ನೋಡಲಾಗಿ—ಅವುಗಳಲ್ಲಿ ಕೆಲವು ಗೋವಾ ಸೋಡ್ತಿ ಚೀಟಿಗಳು. ಇವು ಬಹಳವಾಗಿ ಚಿತ್ರ ಹಿಂಸೆಗೆ ಗುರಿಯಾದಂತೆ ಕಂಡಿತು.)

ಒಂದೆರಡು ಕಾಗದದ ಚೂರುಗಳು ದಾಕ್ತಾರರ ಮದ್ದಿನ ಪಟ್ಟಿಗಳಾಗಿದ್ದುವು. ಒಂದು ಒಡೆಯದೆ, ಸಶರೀರೆಯಾಗಿದ್ದ ವಿಸ್ಕಿಸೀಸೆ. ಒಂದು ಮಿತಸಂತತಿಯ ವಿಷಯವಾದ ಪ್ರಸಿದ್ಧ ಗ್ರಂಥ—ಇದಕ್ಕೆ ಬಹಳ ವಯಸ್ಸಾಗಿದ್ಧಂತೆಯೂ ಕೆಲವೊಂದು ನಡುವಣ ಹಾಳೆಗಳು ಹರಿದು, ಉಳಿದುವು ಉಳಿದಂತೆಯೂ ಕಂಡಿತು. ಒಂದೆರಡು ವಿಶ್ವವಿದ್ಯಾಲಯ ಪರೀಕ್ಷಾ ಪತ್ರಗಳೂ ಇದ್ದವು. ಕ್ಷೌರಾವಶೇಷಗಳು ಉಳಿದ ಮಾಲುಗಳಲ್ಲಿ ಮುಕ್ಕಾಲು ಮೂರು ವೀಸಾಗಿತ್ತು.

ನನ್ನ ಕಣ್ಣೆದುರಿಗೇನೆ ಮುನಿಸಿಪಲ್ ಲಾರಿಯೊಂದು ಬಂದು ಆ ದುಸ್ತು ಬೀನಿನ ನಷ್ಟಕಾಯವನ್ನು ಬಿಟ್ಟು ಉಳಿದ ಸಾಕ್ಷಿ ಕಂಭಗಳನ್ನೆಲ್ಲಾ ಕಿತ್ತು ಒಯ್ದುದ್ದರಿಂದ, ಆ ಮೃತ್ಯು ಪತ್ರವನ್ನು ಉಪಾಯವಿಲ್ಲದೆ ನಿಲ್ಲಿಸಬೇಕಾಯಿತು. ನಾನು ಹೊರಡುವ ಗಳಿಗೆಗೆ ಅವನಾಗಿ ನನ್ನನ್ನು ಕರೆದನು.

ನಾನು—ಏಕೆ?

ಅವನು—ಇಷ್ಟೆಲ್ಲ ಬರೆದು ಕೊಂಡಮೇಲೆ ನನ್ನನ್ನು ಮರೆತು ಬಿಡುವೆಯಾ?

ನಾನು—ಇಲ್ಲ. ಆದರೆ ಏನು ಮಾಡಬೇಕು?

ಅವನು—ಹಿಂದಿನ ಕಾಲದಲ್ಲಿ ಕವಿಗಳು ನನ್ನಂಥ ಬೀದಿ ಕಾಪಿನಾಳ್ವರ ಸಲುವಾಗಿ ಚರ್ಮ ಶ್ಲೋಕವನ್ನು ಬರೆಯುತ್ತಿದ್ದರು. ನೀನು ಯಾರನ್ನಾದರೂ ಹಿಡಿದು ನನ್ನ ವಿಷಯವಾಗಿಯೂ ಅಂತಹ—

ನಾನು—ಚರ್ಮಶ್ಲೋಕವನ್ನು!

ಅವನು—ಆಗಲಾರದೇ?

ನಾನು—ನನಗೆ ತಮ್ಮ ಪರಿಚಯವಿಲ್ಲ; ಉಳಿದವರಿಂದ ಮಾಡಿಸಲು ನನಗೆ ಧೈರ್ಯ ಸಾಲದು!

ಅವನು—ಅಯ್ಯೋ ನನಗೆ ಯೋಗ್ಯತೆಯಿಲ್ಲ. ಅರ್ಥವಿಲ್ಲದವರಿಗೆ ಸನ್ಮಾನ ದೊರೆತಿದೆ. ಜನ್ಮದಲ್ಲಿ ಒಂದು ಗಳಿಗೆ ಸ್ವಾರ್ಥ ಮರೆಯದವರೂ ದಿವಾನ ಬಹದ್ದೂರರಾಗಿದ್ದಾರೆ—ಏನಿಲ್ಲ, ಒಂದು ಸಾಮಾನ್ಯ ಕವನವಾದರೂ ಸಾಕು.

ನಾನು—ಪ್ರಾಸವಿಲ್ಲದಿದ್ದರೂ ಚಿಂತೆಯಿಲ್ಲವೇ?

ಅವನು—ಪ್ರಾಸ ಬೇಡ! ನನ್ನ ಹೆಸರಿಗೆ ಸರಿ ಪ್ರಾಸ ಬರುವ ಶಬ್ದಗಳನ್ನು ಹೆಣೆದು ಕವಿತೆ ರಚಿಸಲು ಪ್ರಾಸವನ್ನಾಯಬಲ್ಲ ವರ ಕವಿಗಳು ಈಗೆಲ್ಲಿ?

ನನಗೆ ಬಲು ಅವಮಾನ ವಾಯಿತು. ಇಂದಿನ ಯುಗ ಧರ್ಮಕ್ಕೆ ಸರಿಯಾಗಿ ಮೌನವಾಂತು ಹೊರಟು ಹೋದೆ.





# ಪರಿತ್ಯಕ್ತ ದೀಪಸ್ತಂಭ

ತಿರುಗಿ ಮಂಗಳೂರಿನ ಬೀದಿಯಲ್ಲಿ—ಬೀದಿಯ ಸಂದಲ್ಲ—ಮಂಗಳೂರಲ್ಲಿ ಬೀದಿಯ ಸಂದುಗಳು ಕಡಿಮೆ. ಸಂದುಗಳಲ್ಲಿ ಬೀದಿಗಳೇ ಅಧಿಕ. ನಾನು ಹೇಳುತ್ತಿರುವ ಪ್ರದೇಶವು—ರಾಜಮಾರ್ಗಗಳು ಮಂತ್ರಿಗಳಂತೆ ಸೇರಿ ಮಂತ್ರಾಲೋಚನೆ ಮಾಡುತ್ತಿರುವ ಪ್ರದೇಶವು. ಒಂದು ಸಂಜೆ—ಸಂಜೆ ಎಂದರೆ ಸಂಜೆ ಕಳೆದ ಕೆಲವು ತಾಸುಗಳ ಬಳಿಕ—ಶುಕ್ಲಪಕ್ಷದಲ್ಲಿ ಕಾಣಿಸುವ ಚಂದ್ರನೇ ಆ ದಿನವೂ ಕಾಣಿಸಿದ್ದ. ಸಾಮಾನ್ಯವಾಗಿ ಅವನ ಪ್ರಕಾಶವಾಗಿತ್ತು. ಹಿಟ್ಟಿನಂತೇನು ಬೆಳದಿಂಗಳು ಹರಡಿರಲಿಲ್ಲ—ಹರಡಿದ್ದರೆ ನಷ್ಟವೇನೂ ತಿಳಿಯದು. ಆ ದಿನ ಕ್ಷೀಣ ಬೆಳಕಿನಂತೆ ಅದು ಹರಡಿತ್ತು. ಬೇಸರವೆದ್ದು, ಸೆಕೆಕಾಲದ ಸೊಳ್ಳೆಗಳ ಕಾಟಕ್ಕೆ ಅಂಜಿ ಬಯಲಿನ ಕಡೆಗೆ ಹೊರಟು, ನಡುವೆ ಈ ಪ್ರದೇಶಕ್ಕೆ ಬಂದೆನು. ಎದುರಿಗೆ ಭೇಟಿಯಾಯಿತು ಒಂದು ಡಿಸ್ಕಾರ್ಡೆಡ್ ದೀಪದ ಕಂಭ! ಸಂಸ್ಕೃತದಲ್ಲಿ ನುಡಿದರೆ ಚೆನ್ನಾಗಿರುವುದೆಂದು ಪರಿತ್ಯಕ್ತ ದೀಪಸ್ತಂಭ ಎನ್ನಬೇಕಾಯಿತು. ಮಹಾ ಸಾಧ್ವಿಯು ನಿಂತಂತೆ ಅದು ನಿಂತಿತ್ತು. ಜೋಲು ಮೋರೆ, ಮನಸ್ಸಿನಲ್ಲಿ ಬಲು ವ್ಯಥೆ ತುಂಬಿರಬೇಕು. ಒಂದು ಕಡೆ ಚಂದ್ರನಿಂದ, ಅದರ ನೆರಳೊಂದು ಹೊರಟಿತ್ತು. ಇನ್ನೊಂದು ಕಡೆ ವಿದ್ಯುದ್ದೀಪವೊಂದು ಮಿನುಗುತ್ತಿತ್ತು. ಅದೂ ಮುತ್ತೈದೆ ದೀಪದ ಕಂಭದ ನೆರಳನ್ನು ತಡೆಯುತ್ತಿತ್ತು. ಆದರೆ ಒಂದು ಪರಿವರ್ತನೆ ಮಾತ್ರ ವಿಶೇಷವಾಗಿ ಕಾಣಿಸುತ್ತಿತ್ತು—ಅದರೊಳಕ್ಕೆ ನ್ಯಾಯವಾಗಿ ಉರಿಯಬೇಕಾಗಿದ್ದ ದೀಪ ಉರಿಯುತ್ತಿರಲಿಲ್ಲ. ಸುಮ್ಮನೆ ಹಾದಿಸಾಗಿ ಹೋಗಲಾರದೆ ನಾನು ಮಾತನಾಡಿಸುತ್ತ ನಿಂತೆ.

ನಾನು—ಅಮ್ಮಾ, ಏನಿದು ಇಷ್ಟು ಚಿಂತೆಯಿಂದ ಅಶೋಕವನದಲ್ಲಿ ಸೀತೆ ಕಾದು ಕರಗಿ ಕುಳಿತಂತೆ, ನೀನು ನಿಂತಿರುವೆ?



........ಎದುರಿಗೆ ಭೇಟಿಯಾಯಿತು ಒಂದು ಡಿಸ್ಕಾರ್ಡೆಡ್ ದೀಪದ ಕಂಭ.

ಅವಳು---(ಮೌನ)

ನಾನು---ಪರಪುರುಷರೊಡನೆ ಮಾತನಾಡಲಾರೆಯೆಂದೇ? ಅಥವಾ ಹೃದಯದಲ್ಲಿ ವ್ಯಥೆಯು ತುಂಬಿದುದರಿಂದಲೇ? ಜನರೂ ಸುಳಿಯುವುದಿಲ್ಲ. ಸುತ್ತಲಿನ ಪ್ರದೇಶವು ಮೌನ--ನೀನು ಹೀಗೆ! ಏನಿದು ಎಲ್ಲ ಸೂತಕದ ಚಿಹ್ನೆಯೇ?

ಅವಳು---ಏನು ಕಣ್ಣಿಲ್ಲವೇ?

ನಾನು---(ಮುಟ್ಟಿ ನೋಡಿಕೊಂಡೆ. ಇದ್ದವು ನನ್ನೆರಡೂ ಕಣ್ಣುಗಳು ತೆರೆದಿದ್ದುವು.) ಇವೆ. ಏಕೆ?

ಅವಳು---ಎದುರಿಗೇನು?

ನಾನು---ನೀನು!

ಅವಳು---ನಾನಾಯಿತಲ್ಲ, ಇನ್ನೂ ಎದುರು?

ನಾನು---(ನೋಡಿದೆ) ಏನೂ ಕಾಣಿಸಲಿಲ್ಲ!

ಅವಳು---ಚೆನ್ನಾಗಿ ನೋಡಬಾರದೇ?

ನಾನು---(ನೋಡಿದೆ ಒಂದು ವಿದ್ಯುದ್ದೀಪವು ಕಾಣಿಸಿತು.)

ಅವಳು---ಹೊಸ ಹೆಂಡತಿಯು ಮನೆಗೆ ಬಂದಿರುವಳು!

ನಾನು---ಯಾರೂ ನಿನ್ನನ್ನು ಉರಿಸುವುದಿಲ್ಲವೇ?

ಅವಳು---ಉರಿಸುವವರೂ ಇಲ್ಲ, ಹೊಗಳುವವರೂ ಇಲ್ಲ.

ನಾನು---ಮತ್ತೆ ನಿಂತಿರುವಿಯೇಕೆ? ನಿನ್ನಂತೆ ಇನ್ನು ನಿಂತವರಿಲ್ಲ!

ಅವಳು---ನಾನು ಮುಂದಿನ ಯುಗಕ್ಕೆ ಸಾಕ್ಷಿಯಾಗಲೆಂದು ನಿಂತೆ. ಸರಿಯಾದ ಮಂಗಳೂರಿನಲ್ಲಿ ಮಾಲ್ಕಮ್ ಕೇಂಬೆಲನಿದ್ದರೆ, ನಮಗೆ ವಿಶ್ರಾಂತಿಯಾದರೂ ಸಿಗುತ್ತಿತ್ತು.

ನನಗೆ ಬಲು ದುಃಖವಾಯಿತು. ಪರಿತ್ಯಕ್ತ ಆ ದೀಪಸ್ತಂಭವನ್ನು ಕಂಡು, ನಿಜಕ್ಕೂ ಸೀತಾಮಾತೆಯಂತೆ-ಅಶೋಕವನದ ಸೀತೆಯಲ್ಲ-ರಾಮನಿಂದ 'ಕಿಕಾಯಿ'ಸಲ್ಪಟ್ಟ ಸೀತೆಯಂತೆ, ದುಷ್ಯಂತನಿಂದ ಸ್ಯಾಂಪಲ್ ನೋಡಿ ಬಿಡಲ್ಪಟ್ಟ ಶಕುಂತಲೆಯಂತೆ ಅವಳು ಕಾಣಿಸಿದಳು.

ನಾನು—ಅಮ್ಮಾ!

ಅವಳು—ನೀನು ಧಾರವಾಡದವನೇ?

ನಾನು—ಏಕೆ ಹಾಗೆ ಹೇಳುವೆ?

ಅವಳು—ಧಾರವಾಡದವರು, ಪತಿವಿಯೋಗಿಗಳನ್ನು ಅಮ್ಮಾ ಎಂದು ಕರೆಯುತ್ತಾರೆ. ನೀನು ನನ್ನನ್ನು ಅವಮಾನಿಸುವಿಯಾ?

ನಾನು—ಅಮ್ಮಾ ನಿನ್ನನ್ನು ನಾನು ಹಾಗೆಂದೇನೆಯೆ? ನೀನು ಭರತಮಾತೆಯಂತೆ. ಭರತ ಪತಿ ವಿಹೀನಳಾಗಿ, ಆರ್ತಸ್ಥಿತಿಗೆ ಬಂದಿರುವ ನಿನ್ನನ್ನು ಕಂಡು ಅವಮಾನಗೊಳಿಸುವುದೇ? ಅಮ್ಮಾ, ಏಕೆ ನಿಂತಿರುವೆ ಇನ್ನು? ನವಯುಗವು ಬಂದಿತು! ವಿದ್ಯುತ್ ಗುಳ್ಳೆಗಳನ್ನು ಉರಿಸುತ್ತಿದ್ದಾರೆ! ನಿನ್ನನ್ನು ವಿಶ್ರಾಂತಿಗಾದರೂ ಒಯ್ಯಲಾರರೆ?

ಅವಳು—ಇಲ್ಲ. ನಾನು ಪ್ರಾಚೀನ ಯುಗದ ಮಾಸ್ತಿಕಲ್ಲಿನಂತೆ ನಿಲ್ಲಬೇಕಾಗಿದೆ. ನನ್ನನ್ನು ನಟ್ಟುದೂ ಸೂತಕದ ಸ್ಮರಣೆಗಾಗಿ, ನಾನು ಉಳಿಯುವುದೂ ಅಷ್ಟಕ್ಕೇ!

ನಾನು—ಸೂತಕಕ್ಕಾಗಿ ನಟ್ಟರೇ?

ಅವಳು—ಕೆಳಗೆ ನೋಡು.

'ಇಂಥವರ....ಧರ್ಮ ಪತ್ನಿ ಇಂಥವರ....ಸಲುವಾಗಿ ಈ ದೀಪಸ್ತಂಭವನ್ನು ವಿರಾಜಿಸಲಾಗಿದೆ' ಎಂದು ಬರೆದಿತ್ತು.

ನಾನು—ಹೊ! ಪುಣ್ಯಕೆಲಸ. ಅಲ್ಪ ಬುದ್ಧಿಯವರು, ಕಾರ್ತಿಕ ಮಾಸ ವೊಂದರಲ್ಲೇ, ಆಕಾಶಗೂಡನ್ನು ರಚಿಸುತ್ತಾರೆ. ಉಳಿದ ರಾತ್ರಿಗ

ಳಲ್ಲೂ ಮಡಿದ ಆತ್ಮಗಳು ಹಾದಿ ತಪ್ಪಬಹುದೆಂದು ಈ ದೀಪವನ್ನು ನಟ್ಟರೇ? ಆದರೆ–ಆತ್ಮಗಳು ಮಂಗಳೂರಿನ ಈ ಹಾದಿಯಾಗಿ ಬರಲು ಕಾರಣವಿದೆಂತು?

ಅವಳು—ನೀನು ವಿಚಾರ ಹೀನ. ನಟ್ಟರೆಂದ ಮಾತ್ರಕ್ಕೆ ಆಯಿತೇ? ನನ್ನಿಂದ ಯಾರಿಗೆ ಏನೂ ಆಗಲಿಲ್ಲ! ನನ್ನ ಮನೆಯನ್ನು ಬೆಳಗಿದವರಾರು?

ನಾನು—ಏಕೆ? ಬುರುಡೆ, ದೀಪ–ಎಲ್ಲ ಇದೆಯಲ್ಲ!

ಅವಳು—ನೋಡಪ್ಪ.

ನಾನು—ಪತ್ತೆದಾರನಂತೆ, ಆ ಕಂಭವೇರಿ ಒಳಗಿನ ಅವಯವಗಳನ್ನು ನೋಡಿದೆ. ತೆರಿಗೆಯಿಂದ ಒಡೆಯಲ್ಪಟ್ಟ ಪ್ರಜಾ ಜನರ ತಲೆ ಬುರುಡೆಯಂತೆ ಅಲ್ಲಿನ ಬುರುಡೆ ಯಿತ್ತು. ದೀಪವಿತ್ತು - ಬತ್ತಿಯಿದ್ದಿಲ್ಲ.

ಅವಳು—ತಿಳಿಯಿತೇ?

ನಾನು—ಬುರುಡೆ ದುರುಸ್ತಿ ಇಲ್ಲ, ಬತ್ತಿ - ಬತ್ತಿ ಊಹೂಂ!

ಅವಳು—ಅದಿದ್ದರೂ ನನ್ನ ಅವಸ್ಥೆ ಒಂದೇ.

ನಾನು—ಏಕೆ?

ಅವಳು—ಇದನ್ನೂ ಉರಿಸುವ ಸಾಬಿಗೆ ನನ್ನ ಮೇಲೆ ಮೊದಲಿನಿಂದಲೂ ಅನಾದರ. ನನ್ನ ಬಳಿಗೆ ಬಂದಾಗಲೆಲ್ಲ 'ಇಲ್ಲಿ ಉರಿಯುವ ದೀಪ ಬಡವರ ಮನೆಯನ್ನು ಬೆಳಗಲಿ!'—ಎನ್ನುತ್ತಿದ್ದ.

ನಾನು—ಉರಿಸಲೇ ಇಲ್ಲವೆ!

ಅವಳು—ಹಾಗೆ ಮಾಡಿದರೆ ಸಿಟ್ಟಾಗುವೆನೆಂದು, ಸ್ನಾನ ಮಾಡದೆ ಮಡಿಯುಡುವ ಭಟ್ಟನಂತೆ ಮಾಡಿದನು!

ನಾನು—ಏನದು?

ಅವಳು—ಗಿಡ್ಡವಾದ ಬತ್ತಿ. ಉರಿಸಿ ಹೋದ ಹದಿನೈದು ನಿಮಿಷ ದಲ್ಲಿ ನನ್ನ ಎಟುಕಿಗೆ ಎಣ್ಣೆಯಿಲ್ಲ. ಎಣ್ಣೆಯನ್ನು ತರಲು ಮರೆತರೆ ನೀರು ಸುರಿದು—ಎಣ್ಣೆಯನ್ನು ಮೇಲೇರಿಸಿದ.

ನಾನು—ಬಲು ಚತುರ. ಆದರೆ, ನೊಂದಿದ ದೀಪವನ್ನು ಕಂಡು ಅರ್ಜಿ ಮಾಡಿದವರಿಲ್ಲವೇ?

ಅವಳು—ಜನರಿಗೆ ನಾನಿದ್ದೇನೆಂದು ತಿಳಿದರಲ್ಲವೆ? ಹಗಲಿಗೆ ಇಲ್ಲಿ ನಿಂತಿರುತ್ತೇನೆ. ರಾತ್ರಿಯಾದರೆ—ಎದುರಿನ ಬೀಡಿ ಅಂಗಡಿಯವರು ಬಲ ವಾದ ಇನ್ನೊಂದು ದೀಪ ಉರಿಸುತ್ತಾರೆ. ಹೀಗಾಗಿ ನಾನಿದ್ದೂ ಸತ್ತಂತೆ.

ನಾನು—ನಿನ್ನನ್ನು ಇಲ್ಲಿ ಸ್ಥಾಪನೆ ಮಾಡಿದವರು........

ಅವಳು—ನನ್ನ ಹಣೆಯ ಮೇಲೆ (ಪೀಠದ) ಬರೆದ ಚರ್ಮ ಶ್ಲೋಕ ವನ್ನು ಹಗಲಲ್ಲದೆ ರಾತ್ರಿ ಯಾರು ಓದುತ್ತಾರೆ?

ನಾನು—ಹಾಗಾದರೆ ನಿನ್ನನ್ನು ಯಾಕೆ ನೆಟ್ಟರು?

ಅವಳು—ನಾನಿಲ್ಲವಾದರೆ, ಇದು ನಡು ಬೀದಿಯಲ್ಲಿ ನಟ್ಟ ಗೋರಿ ಯಾದೀತೆಂದು. ಗೋರಿಗೂ, ಮಾಸ್ತಿ ಕೈಗೂ ವ್ಯತ್ಯಾಸವಿಲ್ಲವೇ?

ನಾನು—ಅಯ್ಯೋ ತಾಯಿ, ಈ ಅವಮಾನ ಸಹಿಸಿ, ಎಷ್ಟು ದಿವಸ ಇರುವೆ?

ಅವಳು—ನನಗೆ ಅನಂತವಾಗಿ ಇರುವ ಆಸೆ. ಹೊಸ ಯುಗ ಬಂದಿದೆ. ವಿದ್ಯುತ್ತಿನಿಂದ ನನ್ನ ಜೀವನ ಅವಮಾನಿತ ವಾಯಿತು. ನಾನು ನಿಲ್ಲುತ್ತೇನೆ. ಒಳಗೆ ದೀಪ ವಿಲ್ಲದಿದ್ದರೂ ನಾನು ನಿಲ್ಲುತ್ತೇನೆ. ಆಚಾರ್ಯರು ಪಂಡಿತರು ಪ್ರಪಂಚ ಮುಂದರಿಯುವುದನ್ನು ಕಂಡು ಶಾಸ್ತ್ರ ಓದುವು ದನ್ನು ಬಿಡುತ್ತಾರೆಯೆ? ಅವರ ಕಾಲದ ಸಂಸ್ಕೃತಿಯ ಕುರುಹಾಗಿ, ಅರ್ಥವಾಗದೆ ಆಕಾಶ ಹೊತ್ತು ನಾನೂ ನಿಲ್ಲುತ್ತೇನೆ. ಚತುರ್ಮುಖ ಬ್ರಹ್ಮ ನಂತೆ ನಾಲ್ಕೂ ದಿಕ್ಕು ನೋಡುತ್ತ ನಿಲ್ಲುತ್ತೇನೆ.

ನಾನು—ಬ್ರಹ್ಮನ ನಾಲ್ಕು ಮುಖಗಳು ಹೀಗೆ, ನಾಲ್ಕು ದಿಕ್ಕಿಗೆ ಇದ್ದುವೇ? ಅಥವಾ ಕೈಯಲ್ಲಿ ಹಿಡಿಯುವ ಇಸ್ಪೇಟು ಎಲೆಗಳಂತೆ ಒಂದೇ ಸಾಲಿನಲ್ಲಿ ಇದ್ದುವೇ?

ಅವಳು—ನನ್ನಂತೆಯೇ ಇರಬೇಕು.

ನಾನು—ಹಾಗಿದ್ದರೆ ಎಲ್ಲಾದರೂ ಸಂಚಾರಕ್ಕೆ ಹೋಗುವಾಗ?

ಅವಳು—ಬ್ರಹ್ಮನು ಸಂಚರಿಸುತ್ತಿದ್ದನೇ? ಅವನಿಗೆ ಕಾಲಿದೆ ಯೆಂಬುದೂ ತಿಳಿಯದು. ರುಂಡ, ಮುಂಡ, ಬಾಯಿಗಳಿಷ್ಟೆ. ಅದರಿಂದಲೆ ವಿಷ್ಣುವು ಅವನನ್ನು ತಾವರೆ ಹೂವಿನಲ್ಲಿ ಅಡಗಿಸಿ ಕುಳ್ಳಿರಿಸಿ ಬಿಟ್ಟಿದ್ದಾನೆ. —ಏಳುವುದಕ್ಕಿಲ್ಲ.

ನಾನು—ನನಗೆ ಆ ಯೋಚನೆ ಹೊಳೆದಿರಲಿಲ್ಲ. ಆದರೆ ಹಾಗೆ ನಿಂತು, ಏನು ಉಪಯೋಗ?

ಅವಳು—ಈ ವರೆಗೆ ಹೊಂದಿದವರಿಲ್ಲವೇ? ನೀನು ಜಸ್ಟಿಸ್ ರಾನಡೆ ವಿಚಾರ ಕೇಳಿಲ್ಲವೆ? ಅವನು ನನ್ನ ಬಂಧುವೊಬ್ಬನ ತೋಳಿಗೆ ತನ್ನ ಜುಟ್ಟನ್ನು ಸಿಕ್ಕಿಸಿಕೊಂಡು, ಓದಿ ಪ್ರವೀಣನಾಗಿ ಕೊನೆಗೆ—ನ್ಯಾಯಾಧೀಶನಾದ.

ನಾನು—ಯಾರು ಅದು ತೆಲಂಗರೇ, ಅಥವಾ ರಾನಡೆಯವರೇ?

ಅವಳು—ಯಾರಾದರೂ ವ್ಯತ್ಯಾಸವೇನು? ನ್ಯಾಯಾಧೀಶರಾಗುವ ಆ ಯೋಚನೆ ಇರುವವರು ನನ್ನಲ್ಲಿಗೆ ಬಂದರಾಯಿತು.

ನಾನು—ಈಗ ಹಾಗೆಲ್ಲ ಸಿಗುವುದಿಲ್ಲವಂತೆ ಕೆಲಸ. ಅದಕ್ಕೆ ಬಹಳ ಪರೀಕ್ಷೆ, ಜಾತಿ, ಕೋಮು—ಇವುಗಳ ತನಖೆ ನಡೆಯಬೇಕಂತಲ್ಲ.

ಅವಳು—ಹಾಗಾದರೂ ಇನ್ನೊಂದು ಕೆಲಸಕ್ಕಾದರೂ ನಾನು ನಿಂತಿರಬೇಕು?

ನಾನು—ಏನದು?

ಅವಳು—ಬೇಡ, ಹೋಗು, ನೀನೆ ಹಾಗೆ ಮಾಡಿ ಬಿಟ್ಟೆಯಾ—ಅಂದರೆ ಮುಂದೆ ಪತ್ರಿಕೆಗಳಿಗೆ ಬರೆಯುವ ಆಸಾಮಿಗಳಲ್ಲಿ ಒಬ್ಬನು ಇಲ್ಲದಂತಾಗ ಬಹುದು........

ನಾನು—ನಿನ್ನ ಮಾತೇ ತಿಳಿಯದು!

ಅವಳು—ಯಾರಿಗೂ ಹೇಳುವುದಿಲ್ಲವೆಂದರೆ ಮಾತ್ರ.

ನಾನು—ಇಲ್ಲ.

ಅವಳು—ನನ್ನನ್ನು ಇಲ್ಲಿ ಇರಿಸಿದ ಕಾರಣ ತಿಳಿಯದೇ? ಈ ನಗರದಲ್ಲಿ ನಿರುದ್ಯೋಗ ಕಾರಣ ಹೆಚ್ಚುತ್ತಿದೆಯಂತೆ। ಕಲಿತು ನಿರಾಶರಾದ ತರುಣರಿಗೆ ನಾನಾದರೂ ಆಶ್ರಯ ಕೊಡಲೆಂದು.

ನಾನು—ನೇಣು ಹಾ........

ಅವಳು—ಮಲ್ಲಗೆ ಮಾತನಾಡು. ಅಂಥವರು ಯಾವಾಗಲೂ ಇಲ್ಲಿ ಸಂಚರಿಸುತ್ತಾರೆ. ಅವರಿಗೆ ತೊಂದರೆಯೆಂದರೆ—ಈ ವಿದ್ಯುತ್ ದೀಪ, ಆ ಮೇಲಿನ ಚಂದ್ರ. ಅವರು ಮರೆಯಾಗಿ ಬಿಟ್ಟರೆ........

ನಾನು—ಅಮ್ಮಾ, ನಿಜವಾಗಿಯೂ ನೀನು ಭಾರತಾಂಬೆಯ ಮಗಳು. ನಿನ್ನ ತಾಯಿ ಹೆರರಿಗೆ ಉಪಕಾರ ಮಾಡಿ, ಮನೆಮಕ್ಕಳನ್ನು ವನವಾಸವಿರಿಸಿದಂತೆ, ನೀನಾದರೂ ಉಪಕಾರ ಮಾಡುತ್ತಿರುವೆಯಲ್ಲ........

ದೂರದಿಂದ 'ಭಾರತ ಮಾತಾಕಿ ಜೈ' ಎಂಬ ಸದ್ದು ಕೇಳಿಸಿತು. ಇನ್ನು ಅಲ್ಲಿ ನಿಲ್ಲಲಾಗದೆಂದು ಹೊರಟೆ. ಈ ಪ್ರಸ್ತಾಪವನ್ನು ಯಾರಿಗೂ 'ಹೇಳ' ಬಾರದೆಂದು ವಚನವಿತ್ತುದರಿಂದ ಬರೆಯ ಬೇಕಾಯಿತು. ಇದು ಈಗಿನ ಧರ್ಮಕ್ಕೆ ವಿರೋಧವಾಗಲಾರದಷ್ಟೆ?





# ಗುಡಿಯಿಲ್ಲದ ಮಹಾಲಿಂಗ

(ಸುಳ್ಯದ ಬಳಿಯ ಕಗ್ಗಾಡಿನಲ್ಲೊಂದು ದಿನ ಭೇಟಿಯಾದ ಮಹಾಲಿಂಗನ ಕಥೆಯಿದು. ಪಯಸ್ವಿನೀ ನದಿಯ ತೀರ. ನಾವು ಕೆಲವರು ಆಲಟ್ಟಿಗೆ ಹೋಗುತ್ತಿದ್ದೆವು. ನದಿಯಾಚೆಗಿನ ದಟ್ಟ ಕಾಡಿನಲ್ಲಿ ಮಹಾಲಿಂಗನ ಗುಡಿಯಿದೆ. ಗುಡಿಯೀಗ—ಸುತ್ತಲಿನ ಪ್ರದೇಶದೊಂದಿಗೆ ಬೆರತಿದೆ. ಮಹಾಲಿಂಗನೊಬ್ಬನು, ಅರೆ ಕೆಸರು ಕೊಳಚೆಗಳಲ್ಲಿ ನಿಂತು ರೋದಿಸುತ್ತಿದ್ದಾನೆ. ಅಂತಹ ಮಹಾಲಿಂಗರು ನಮ್ಮ ಜಿಲ್ಲೆಯ ನೂರಾರು ಮೂಲೆಗಳಲ್ಲಿರುವರು. ಎಷ್ಟೋ ಮಹಾಲಿಂಗರು, ಇದೇ ರೀತಿ ನನ್ನೊಡನೆ ಮಾತನಾಡಿದುದರಿಂದ, ಈ ಮಹಾಲಿಂಗನ ವಿಚಾರ ಬರೆಯುತ್ತಿದ್ದೇನೆ.)

ನಾವು ಕೆಲವರು ನದಿಯನ್ನು ದಾಟಿದೆವು. ಕಲ್ಲು ಬಂಡೆಗಳ ಮೇಲೆ ಮೊಸರು ಕಡೆಯುವಂತೆ, ತನ್ನನ್ನು ತಾನು ಕಡೆದುಕೊಂಡು ಪಯಸ್ವಿನಿ ಹರಿಯುತ್ತಿದ್ದಳು. ಪಯಸ್ವಿನಿ, ತಪಸ್ವಿನಿಯು ಆಹುದೋ ಏನೋ—ಕಾಡಿನೆಡೆಯಲ್ಲೆ ಅವಳ ವಾಸ. ಪಯಸ್ವಿನಿಯ ನೀರನ್ನು ಕುಡಿದೆವು. ಉಂಡ ಮನೆಗೆರಡೆಣಿಸಿ—ನೀರನ್ನು ಕುಡಿದು ಅವಳ ಮೋರೆಯ ಮೇಲೆ ಉಗುಳಿ ಮುಂದೆ ಸಾಗಿದೆವು. ತುಸು ದೂರ ಸರಿದಿದ್ದೆವಷ್ಟೆ,—ದರಿದ್ರದ ಮರಗಪ್ಪೆಯೊಂದು, ಕಿರುಚುತ್ತಿತ್ತು.

ನಾನು—ಎಲಾ, ಚಿರಿ ಚಿರಿ ಚೀರುವವರು ಯಾರು, ಇಸ್ಕೂಲು ಮಾಸ್ತರರ ಹಾಗೆ! ಯಾರು ಇದರ ಲೆಕ್ಕರು ಕೇಳುವವರಂತೆ.

ನನ್ನ ಜತೆಯಲ್ಲಿದ್ದ ಒಬ್ಬರು ಮಾಸ್ತರರು—(ಸಿಟ್ಟಾದರೋ ಏನೋ) ಅದು ಮರ ಕಪ್ಪೆಯಲ್ಲವೆ?

ನಾನು—ಕಪ್ಪೆಯೆಂದರೆ ಬ್ರಾಹ್ಮಣನಂತೆ. ನಾವು ಚಿಕ್ಕವರಿದ್ದಾಗ ನಮ್ಮಮ್ಮ ಹಾಗೆ ಹೇಳುತ್ತಿದ್ದ ನೆನಪು. ಅದನ್ನು ಕೊಂದರೆ ವಿಪ್ರರನ್ನು

ಕೊಂದಷ್ಟು ಪಾಪ ಎನ್ನುತ್ತಿದ್ದರು. ಮುಂಗಾರು ಮಳೆಗೆ ನಮ್ಮೂರ ಗದ್ದೆ ಅಂಚಿನಲ್ಲಿ, ಅವು ನಾಲಾಗಿ ಕುಳಿತು ಟ್ರೊಂಯಿಗುಟ್ಟುವುದನ್ನು ನಾನು ಕಂಡವನು. ಬ್ರಾಹ್ಮಣರು ರುದ್ರದ ದಿವಸ ಅದೇ ರೀತಿ ವೇದದ ಋಕ್ಕು ಹೇಳಿದುದನ್ನು ಕೇಳಿದ್ದೆ. ಹೀಗಿದ್ದು—ಅದನ್ನು ಬ್ರಾಹ್ಮಣ ಜಾತಿಗೆ ಸೇರಿಸಿದ್ದು ತಪ್ಪಲ್ಲ. ಆದರೆ—ಕಪ್ಪೆಗೆ ಮರ ಏರುವ ಕೆಲಸವೇಕೆ? ಭಿಲ್ಲವರ ಕೆಲಸ ಬ್ರಾಹ್ಮಣರಿಗೇಕೆ?

ಮಾಸ್ತರರು—ಛೇ, ಅದು ಇರುವುದು ಹೆಚ್ಚಾಗಿ ಮರದ ಮೇಲೆ, ಅತ್ತಿಂದಿತ್ತ ಹಾರುವುದೂ ಉಂಟು.

ನಾನು—ಹಾಂ—ಈ ಜಾತಿಯ ಕಪ್ಪೆಗಳನ್ನು ಕಂಡೇ 'ಹಾರುವ' ಎಂದದ್ದು. ಇರಲಿ ನೋಡಿ ಬಿಡುವ ಹಾರುವನ ರೂಪವನ್ನಾದರೂ.

ಮಾಸ್ತರರು—ಪಡ್ಕ ಆಯಿತು, ಕಪ್ಪೆ ನೋಡಲಿಕ್ಕೆ ನಿಂತರೆ, ಹೊತ್ತು ಮುಣಗೀತು ಆಲಟ್ಟಿ ಮುಟ್ಟುವಾಗ.

ನಾನು—ಅಲಾ, ಆ ಕಪ್ಪೆ ಏನು ಮಂತ್ರ ಹೇಳುತ್ತಿದೆ, ರುದ್ರದ ಬ್ರಾಹ್ಮಣರ ಹಾಗೆ?

(ಹೀಗೆಂದು ಭಾರೀ ಪತ್ತೆದಾರನಂತೆ, ಅದರ ನಿನಾದವು ಪೂರ ಮಟ್ಟ ಸ್ಥಳಕ್ಕೆ ವಿಜಯಂಗೈದೆ. ನೋಡುವಲ್ಲಿ ಸದರಿ ಕಪ್ಪೆಯಿತ್ತು. ಒಂದು ಕಲ್ಲಿನ ಮೇಲೆ ಕುಳಿತು ಟ್ರೊಂಯ್ ಗುಟ್ಟುತ್ತಿತ್ತು.)

ನಾನು—ಬ್ರಾಹ್ಮಣರು ಶಿವಲಿಂಗದ ಮುಂದೆ ಕುಳಿತು ರುದ್ರ ಹೇಳಿದರೆ, ನೀನು ಲಿಂಗದ ತಲೆಯ ಮೇಲೆಯೇ ಕೂತು........

(ಕಪ್ಪೆಗೆ ಅವಮಾನ ವಾಯಿತೋ ಏನೋ ಅದು ಓಡಿತು.)

ಮಾಸ್ತರರು—ಅಲ್ಲ, ಅದು ನಿಜಕ್ಕೂ ಶಿವಲಿಂಗವೇ? ಈ ಗುಡಿಯ ಹೆಸರೇನು? ನೋಡಿ, ಅದರ ಪಾಣಿ ಪೀಠ, ಗುಡಿಕಲ್ಲು, ಎಲ್ಲಾ ಚೆದರಿ ಬಿದ್ದದ್ದು........

(ಹಾಳು ಗುಡಿಯೊಂದರ ಭಗ್ನಾವಶೇಷಗಳು ಕಾಣಿಸುತ್ತಿದ್ದವು. ಮಹಾಲಿಂಗನು ಕುಳಿತಿದ್ದಾನೆ; ಗುಡಿಗೆ ಮಾಡು ಗೋಡೆಗಳೆರಡೂ ಇಲ್ಲ. ಏನೇನೋ ನನ್ನ ಮನಸ್ಸಿನಲ್ಲಿ ವಿಚಾರಗಳು ಬಂದವು.)

ನಾನು—ಅಪ್ಪಾ, ಲಿಂಗು, ಯಾಕೆ ಈ ಜನರು ನಿನ್ನನ್ನು ಅಟ್ಟಕ್ಕೇರಿಸಿ, ಮಹಾಲಿಂಗನನ್ನಾಗಿ ಮಾಡಬೇಕು? ಈಗ ಹೀಗೆ....

ಮಹಾಲಿಂಗ—ನೀನಾರಯ್ಯ ಹೀಗೆ ಬಲು ಕರುಣೆಯಿಂದ....

ನಾನು—ನಾನು ಅಂದರೆ ನಿನ್ನ ಹೆಸರಿನವ—ಶಿವರಾಮ ಅಂತ. ಶಿವನ್ನೇಸಿಟ್ಟು ಹೆಚ್ಚಾಗ್ಬದೀತು ಅಂತ ಹೆದರಿ ಪೆಚ್ಚರಾಮನನ್ನು ಜೊತೆಗೆ ದೋಸ್ತಿ ಮಾಡಿಸಿ ಬಿಟ್ಟರು. ಅದು ಬಿಡು—ನಿನ್ನ ಅವಸ್ಥೆಯೇನು? ನಮ್ಮೂರಲ್ಲಿ ಒಬ್ಬ ಮಹಾಲಿಂಗನಿದ್ದಾನೆ....ಏನು ಅವನ ಠೀವಿ? ಆಳೆತ್ತರದ ಆಸಾಮಿ. ದಿನಕ್ಕೆರಡು ಸಾರಿ ಅಭಿಷೇಕ (ಬರಿ ನೀರಲ್ಲಪ್ಪ) ಮಳೆದಿನವೂ ಸಹ. ಗೋಕರ್ಣದಲ್ಲಿದ್ದಾನೆ ಒಬ್ಬ—ಅವನ ವೈಭವ ಹೇಳ ತೀರದು.

ಮಹಾ—ಅದೇನು ವೈಭವವೊ ಅವರದ್ದು! ನನ್ನ ಹಾಗೆ ಇರುವುದು ಎಷ್ಟೋ ಲೇಸು.

ನಾನು—ಬಾಲ ಹೋದ ನರಿ ಕಥೆ.

ಮಹಾ—ಅಲ್ಲವಯ್ಯ ನನ್ನ ಹೆಸರಿದೆ ಎಂದು ನಿನಗೆ ಹೇಳುತ್ತೇನೆ. ಇಲ್ಲಿ ಪೀಠದ ಮೇಲೆ ಕೂತು ನಾನು ಅನ್ಯಾಯಕ್ಕೆಲ್ಲ ಸಾಕ್ಷಿಯಾಗ ಬೇಕಿತ್ತು ಅನ್ನುತ್ತೀಯಾ?

ನಾನು—ಅನ್ಯಾಯವೆಲ್ಲಿ! ಪುಣ್ಯ! ಪಾಪ, ಭಕ್ತಿ ಇರಲಿ ಇಲ್ಲದಿರಲಿ—ಏಕಾದಶವೂ ದ್ವಾದಶವೂ ರುದ್ರ ಮಾಡುತ್ತಾರೆ. ಅರ್ಥ ಅವರಿಗೇ ತಿಳಿಯದು, ಅರ್ಥಮಾಡಬಯಸುವುದೂ ಇಲ್ಲ. ನಮ್ಮಲ್ಲೇನಾದರೂ ಮಹಾ ಸಭೆಯಾದರೆ ಅಧ್ಯಕ್ಷ ಅನ್ನುವ ಆಸಾಮಿ ಗದ್ದುಗೆ ಏರಿ ಕೂತರೆ ನಾಲ್ಕು ನಾಲ್ಕು ತಾಸು ಏಳುವುದಕ್ಕಿಲ್ಲ. ಬಂದ ಬಂದ ನಾಲಿಗೆ ಚಾಪಲ್ಯದ




ಮಹಾಲಿಂಗನ ತಲೆಯಮೇಲೆ ಕುಳಿತು ' ಹಾರುವ ' ಮಂತ್ರ ಹೇಳುತ್ತಿದ್ದ.

ಆ ಸಾಮಿಗಳು ಕಿರುಚಿದ್ದೆಲ್ಲಾ ಚೆನ್ನಾಗಿದೆ ಎಂದು ಅನುಭವಿಸಬೇಕು. ಇಲ್ಲಿ ಹಾಗೆ ಒದರುವುದಿಲ್ಲವಲ್ಲ. ಒದರುವ ಭಾಷೆ ಸಂಸ್ಕೃತ—ನಿನಗೆ ತಿಳಿದಿರಬೇಕು. ವಿಷಯ ನಿನ್ನ ಸ್ತುತಿ.

ಮಹಾ—ಜಿಂಕೆ ಬಿತ್ತು ಆ ಸ್ತುತಿಗೆ. ಬಾಯಿ ಪಾಠ ಮಾಡಿ ಮೇಲಿಂದ ಮೇಲೆ ಅದನ್ನು ಹೇಳುತ್ತಾ ಇದ್ದರೆ ಬೇಸರ ಅಲ್ಲ—ಕಿವಿ ಒಡ್ಡು ಹೋಗಲಿ ಅನಿಸುತ್ತದೆ.

ನಾನು—ಅನಿಸುತ್ತದೆ. ಅನಿಸಿದರೆ ನಷ್ಟವೇನು? ಪೂಜೆ, ಹೂವು, ಹಾರ, ಗಂಧ, ಇತ್ಯಾದಿ ಎಲ್ಲ ಇರುವಾಗ.

ಮಹಾ—ಅಯ್ಯೋ ಬೇಡಪ್ಪ ಆ ವಿಷಯ ಬಿಡು. ಕರುಳು ಕತ್ತರಿಸುತ್ತದೆ ನೆನೆದರೆ.

ನಾನು—ಕರುಳು ಕಿತ್ತು ಹಾಕಿಬಿಡು. ಕಶ್ಮಲ ಹೊರುವ ಕರುಳಿದ್ದರೆ ಹೊಟ್ಟೆ ಶೂಲಿ.

ಮಹಾ—ಮಾತು ಸರಿಯೇ. ಆದರೆ ಅವರ ವೈಭವ, ನನ್ನ ಹೀನಾವಸ್ಥೆ ಎನ್ನುತ್ತೀಯಲ್ಲ!

ನಾನು—ಗೋಕರ್ಣೇಶ್ವರನ ವೈಭವ ಎಂದು ಹೇಳಿದೆ.

ಮಹಾ—ನಿಜ. ಅದೇ ಬೇಡ ಎಂದೆ. ನೂರು ಜಪ ಮಾಡುತ್ತೇನೆ ಎಂದು ಪೂಜಾರಿ ನನ್ನೆದುರಿಗೆ ಮಾತು ಕೊಡುತ್ತಾನೆ. ಹತ್ತು ಸಹ ಜಪವಿಲ್ಲ. ನೈವಿದ್ಯ; ಆರು ಪಾವು ಅಕ್ಕಿಕೊಂಡು, ಎರಡು ಪಾವು ನೆನಸಿ, ಒಂದು ಪಾವು ತೋರಿಸಿ ಮನೆಗೆ ಒಯ್ಯುತ್ತಾನೆ. ಅಯ್ಯೋ—ಅಯ್ಯೋ ಮಹಾಲಿಂಗ ಭಟ್ಟ ಅಂತ ನನ್ನ ಹೆಸರಿನವನಿದ್ದ. ನನ್ನ ಮುಂದಿನ ನಂದಾದೀಪವನ್ನು—ರಾತ್ರಿ ಗುಡಿ ಮುಚ್ಚುವಾಗ ತಾನೇ ನೊಂದಿಸಿ ಬೆಳಿಗ್ಗೆ ಬಂದಾಗ ತಿರುಗಿ ಹಚ್ಚಿಬಿಡುತ್ತಿದ್ದ.

ನಾನು—ಪೂಜಾರಿಯ ಮಾತು ಬಿಡು. ಅವನಿಗೂ ಪೂಜೆ ಮಾಡಿ ಬೇಸರ ಬರಲಾರದೇ? ಸರಕಾರಿ ಗುಮಾಸ್ತಿಕೆಯಂತೆ ಅವನು ಗೀಚಿದ್ದೇ

ಗೀಚುವುದು. ಆದರೆ ಬರುವ ಭಕ್ತರಿಗಾದರೂ ನಿನ್ನಮೇಲೆ ಪ್ರೀತಿಯಿತ್ತೋ ಇಲ್ಲವೋ?

ಮಹಾ—ಎಲ್ಲಾ ಪ್ರೀತಿಯಿದ್ದವರೇ!

ನಾನು—ಹಾಗೆ ಹೇಳು ಮತ್ತೆ.

ಮಹಾ—ಹೇಳುವುದೇನು ನನ್ನ ಗೋಳನ್ನು? ಬಂದು ಬಂದವರು ನನ್ನ ಹತ್ತಿರ ಫಿರ್ಯಾದೆ ವಿನಃ ಮತ್ತೇನಿಲ್ಲ. ಒಬ್ಬಾಕೆ ಬಂದಳು; ತನಗೆ ಮಕ್ಕಳಿಲ್ಲ ಎಂದು ಅತ್ತಳು. ಇನ್ನೊಬ್ಬನಿಗೆ ಸಾಲವಿದೆಯಂತೆ, ತೀರಿಸಯ್ಯ ಎಂದು ಅತ್ತ. ಮೂರನೆಯವನು ಎಲ್ಲಾ ಬಿಟ್ಟು—ತನ್ನ ಕೋಣಕ್ಕೆ ಕಂಬಳದಲ್ಲಿ ಗೆಲುವಾಗಲಿ ಎಂದು ಕೇಳಿದ.

ನಾನು—ಕೋಣನೇ ನಂದಿಯೇ?

ಮಹಾ—ನನ್ನ ನಂದಿಯೇ? ನೋಡಲ್ಲಿ ಎಂಟು ಚೂರಾಗಿ ಬಿದ್ದಿದೆ.

ನಾನು—ಯಾರು ಘಜನಿ ಮಹಮ್ಮದ ಬಂದಿದ್ದನೇ ಇಲ್ಲಿ?

ಮಹಾ—ಘಜನಿ ಯಾಕೆ? ಆ ಮಹಾಲಿಂಗ ಭಟ್ಟನ ತಮ್ಮನೊಬ್ಬನಿದ್ದ—ಅವನ ಕೆಲಸ. ಎತ್ತಿ ಕಸರತ್ತು ಮಾಡಿ ನಂದಿಯನ್ನು ಕೆಡೆಹಿ ಚೂರು ಮಾಡಿದ. ಊರಲ್ಲಿ ಬೊಬ್ಬೆ ಬಿತ್ತು—ನಂದಿ ಚೂರಾಯಿತು, ಊರು ಸುಡುತ್ತಿದೆ ಎಂದು. ಭಟ್ಟನ ತಮ್ಮನ ಮೇಲೆ ಸಂಶಯ ಬಂದಿತು. ಅವನೇನು ಧೀರ—ನನ್ನ ಮುಂದೆ ಆಣೆ ಮಾಡಿ ಹೇಳಿಬಿಟ್ಟ—ನಾನು ಆ ದಿನ ಗುಡಿಗೇನೇ ಬಂದವನಲ್ಲ ಎಂದು.

ನಾನು—ನಂದಿ. ಇನ್ನು ನಿನ್ನ ಪಾರ್ವತಿ, ಮಗ ಗಣೇಶ, ಶೃಂಗಿ ಭೃಂಗಿ ಮೊದಲಾದ ಪರಿವಾರ———

ಮಹಾ—ಎಂಥವನು ನೀನು! ನನ್ನ ಅವಸ್ಥೆ ಹೀಗಾಗಿರುವಾಗ ಭಂಗಾರದ ಪಾರ್ವತಿಯನ್ನು........

ನಾನು—ಪಾರ್ವತಿ ಯೆಂದರೇನೆ ಚಿನ್ನಕ್ಕೆ ಸಮ.

ಮಹಾ—ಅವಳನ್ನು ಮಾಡಿದ್ದು ಚಿನ್ನದಿಂದ ಎಂದು. ಇನ್ನೊಬ್ಬ ಪೂಜಾರಿ, ಇಲ್ಲಿನ ಮಾಲೆಯವರು ಜೊತೆಯಿಂದ ಪಾರ್ವತಿಯನ್ನು ಎತ್ತಿಕೊಂಡು ಹೋಗಿ—ರಾತ್ರಿಯಲ್ಲಿಯೆ ಕರಗಿಸಿ ಬಿಟ್ಟರು!

ನಾನು—ಪತ್ನಿಯನ್ನಗಲಿದ ಮೇಲೆ—

ಮಹಾ—ಅಗಲುವುದೆಲ್ಲಿ ಬಂತು? ಮುನ್ನೂರು ವರ್ಷದ ಕೆಳಗೆ ನನ್ನನ್ನು ಸ್ಥಾಪನೆ ಮಾಡಿದಾಗ ಆ ವೈಭವವೇನು? ಪಾರ್ವತಿಯನ್ನು ನನ್ನನ್ನು ಕುಳ್ಳಿರಿಸಿ ಲಗ್ನ ಮಾಡಿಸಿ, ಕೋಣೆಯಲ್ಲಿ ಹಾಕಿ!....

(ಈ ಪಬ್ಲಿಕ್ ಫಂಕ್ಶ್ಯನ್ ಹೇಳುತ್ತ ಅವನಿಗೆ ನಾಚಿಕೆಯಾಗಿ ಕಣ್ಣೀರು ಬಂದಿತು.)

ನಾನು—ಹೋಗಲಿ ಬಿಡು ಆ ವಿಚಾರ. ಅವರಿಗೇನು—ದಾಂಪತ್ಯ ಏಕಾಂತದ ವಿಚಾರ ಪಬ್ಲಿಕ್ ಆಗಕೂಡದು ಎಂತ. ಶುದ್ಧ ಪಶು ಮುಂಡೇ ಗಂಡರು.

ಮಹಾ—ಅವರಿಗದು ಅನ್ಯಾಯವಾಗರಲಿಲ್ಲ.

ನಾನು—ಏನು, ಆಗಿನವರೂ ಅಷ್ಟು ಲಜ್ಜ ಭಂಡರೇ?

ಮಹಾ—ಏನೋ—ನನ್ನ ಪ್ರಥಮದ ಪೂಜಾರಿ, ಆಗಿನ ದೇವದಾಸಿ—ಅವರು ನಿತ್ಯವೂ ನನ್ನ ಗುಡಿಯಲ್ಲಿ........

ನಾನು—ಹೋಗಲಿ ಬಿಡು. ಹ್ಯಾಗೂ ನಿನಗೆ ತಿಳಿಯದೆ ಹೋಗುವ ಹಾಗಿಲ್ಲ. ನಿನ್ನನ್ನು ಅಂತರಂಗಕ್ಕೆ ಒಯ್ಯೋಣ ಅಂತ ಮಾಡಿದರು. ಅವರು ಸತ್ತರಲ್ಲ ಈಗ........ವಿನಾಯಕ?

ಮಹಾ—ಒಹೋ ಮಗ ವಿನಾಯಕನೆ? ಆಗ ಸಾವಿರ ತೆಂಗಿನ ಕಾಯಿಯ ಮಾಡು ಗಣಪತಿ.

ನಾನು—ಈ ಕೊಬ್ಬರಿಯನ್ನೆಲ್ಲ ತಿನ್ನಲು ನಿನ್ನ ಮಗನಿಗೆ ಹೇಗೆ ಸಾಧ್ಯವಾಯಿತು? ಹಿಮಾಲಯದಲ್ಲೂ ತೆಂಗಿನ ತೋಟವಿದೆಯೆ?

ಮಹಾ—ಕೊಬ್ಬರಿ ಮಗ ಎಲ್ಲಿ ತಿನ್ನುತ್ತಿದ್ದ? ಕೊಬ್ಬರಿ ಅವರಿಗೆ. 'ರಪ್' ಎಂದು ಗುಡಿಹೊಸ್ತಿಲಿಗೆ ಕಾಯಿ ಒಡೆದು ರಂಪು ಹೆಚ್ಚಾಯಿತು. ಆ ಮೇಲೆ ಚಿಪ್ಪು ಅಲ್ಲಿಯೇ ಎಸೆಯುವುದು–ಇನ್ನೊಬ್ಬನ ಕಾಲಿಗೆ ತಾಕಿ ರಕ್ತ ಸುರಿದ ಮೇಲೆಯೇ ಅದನ್ನು ತೆಗೆಯಬೇಕು.

ನಾನು—ಈಗ ತಾಜಾ ಕಲಂ. ನಿನ್ನನ್ನು ಸ್ಥಾಪಿಸಿ ಎಷ್ಟು ವರುಷವಾಯಿತು?

ಮಹಾ—ಮುನ್ನೂರಾಯಿತೆಂದನೆಲ್ಲ. ಅಂದರೆ ಈಗ ಪೂಜೆ ನಿಂತು ಅರುವತ್ತಾಯಿತು.

ನಾನು—ಮುನ್ನೂರು ವರುಷ! ಅಂದರೆ ಬ್ರಿಟಿಷರು ಬಂದಾಗ ನೀನೂ ಬಂದೆ; ನೀನೇ ಇಳಿದೆ ಅವರು ಇಳಿಸಲಿಲ್ಲ ಅಂತಲೆ? ಆದರೆ ನಮ್ಮೂರಲ್ಲಿ ಒಬ್ಬ ಮಹಾಲಿಂಗನಿದ್ದಾನೆ. ಅವನನ್ನು ಪಾಂಡವರು ತಂದು ಇರಿಸಿದರಂತೆ.

ಮಹಾ—ನನ್ನ ವಿಷಯವೂ ಹಾಗೇ ಇತ್ತು ಕಥೆ. ನಿಮ್ಮ ಜನರಿಗೆ ಮರೆತುಹೋದಷ್ಟು ಹಿಂದಾದ ಪಾಪವೆಲ್ಲ—ಪಾಂಡವರ ತಲೆಯ ಮೇಲೆ.

ನಾನು—ಇರಲಿ, ನಿನಗೆ ಉಂಬಳಿ ಗಿಂಬಳಿ ಇರಲಿಲ್ಲವೆ?

ಮಹಾ—ಇತ್ತು. ಒಂದು ಹತ್ತು ವರುಷ ಭಾರಿ ಉತ್ಸವ, ಪೂಜೆ, ಎಲ್ಲಾ ಆಯಿತು. ದೇವರೆಂದರೆ 'ಮಲೆಯೂರ ಮಹಾಲಿಂಗ' ಎನಿಸಿದೆ. ಕೊನೆಗೆ ಉಂಬಳಿಗಾಗಿ ನಾಲ್ಕು ಸಾರಿ ಕೈ ಕೈ ಆಯಿತು ನನ್ನ ಸನ್ನಿಧಿಯಲ್ಲಿ....ಅನಂತರ....ಎಲ್ಲಾ ತಿಂದರು, ನಾನು ಉಳಿದೆ.

ನಾನು—ಪೂಜೆ, ಗೀಜೆ....

ಮಹಾ—ಯತ್ರ ತಸ್ತಿಕ್ ತತ್ರ ಭಕ್ತಿ!

ನಾನು—ಹೋಗಲಿ ಬರೆ ಗುಡಿಯನ್ನಾದರೂ ಬಿಡಬಹುದಲ್ಲವೇ?

ಮಹಾ—ಪೂಜೆ ಹೋಯಿತು, ಮಾಡಿನ ಹುಲ್ಲು ಕೊಳೆಯಿತು. ಬಾವಲಿಗಳು ಸಹ ನಾಚಿಕೊಂಡು ಹೊರಟವು. ಒಂದೊಂದೇ ಮರ,

ಮೋಪು ಬಿತ್ತು ಕೊಳೆಯಿತು. ಈಗ ನನ್ನ ಗುಡಿಯ ಕಲ್ಲುಗಳು ಯಾರಾರ ಮನೆಯ ಬಚ್ಚಲು, ಮೆಟ್ಟಲು....

ನಾನು—ಗಂಧವಿಲ್ಲ, ಅಭಿಷೇಕವಿಲ್ಲ, ಗುಡಿಯಿಲ್ಲ, ಗೋಪುರವಿಲ್ಲ....

ಮಹಾ—ಎಲ್ಲಾ ಇದೆ. ಗಂಧ ಮೇಲಿಂದ; ಅಭಿಷೇಕ ಅಪೂರ್ವಕ್ಕೆ ಈ ಹಾದಿಯಿಂದ ಸಾಗುವ ನಾಯಿಗಳಿಂದ; ಗುಡಿ ಗೋಪುರ ನೀಲವಾದದ್ದು. ಇಲ್ಲ—ನಾನು ಮೂರನೆಯ ಕಣ್ಣು ತೆರೆಯದೆ ಮೋಸವಾಯಿತು.

ನಾನು—ಅದು ಅಷ್ಟೆ! ಈಗ ನೋಡು, ಬಬ್ಬರ್ಯ, ಪಂಜುರ್ಲಿ, ಕಲ್ಲುರ್ಟಿ—ಇವಕ್ಕೆಲ್ಲ ನೇಮ ತಪ್ಪುವುದಿದೆಯೇ? ನೀನು ಗಾಂಧಿ ಪಾರ್ಟಿ ಸೇರಿದೆ. ಜಬರ್‌ದಸ್ತಿಯಿಲ್ಲದೆ ಯಾರೂ ಕೇಳುವುದಿಲ್ಲ. ನಿನ್ನಣ್ಣ ಗುಜರಾತಿನ ಸೋಮನಾಥ—ಮರ್ಯಾದೆ ಕಳೆದ, ಕಳೆದುಕೊಂಡ. ನಾನು ಅನ್ನುತ್ತೇನೆ—ನೀವು ದೇವರು ಎಂಬ ಬಾಬುಗಳು ಹೀಗೆ ಪೆಚ್ಚಾಗಿರ ಕೂಡದು. ಹಾಲು, ಉಂಡ್ಲಕ್ಕ, ಕಡಬು, ಪಾಯಸ—ಊಹೂಂ ವರ್ಜ್ಯ. ಇನ್ನು ಬ್ರಾಂಬ್ರ ಗಿಲೀಟು—ರುದ್ರ ಅನ್ನುತ್ತಾರಲ್ಲ, ಮಕ್ಕಳು ಮಗಿ ಯಿಂದ ಹಾಗೆ—ಪಟ ಪಟ ಸುರಿಯುವ ಲೆಕ್ಕ—ಕೊಡ್ದೇ ಕೊಡ್ದು.

ಮಹಾ—ಮತ್ತೇನು ಮಾಡ್ಲಿ ನಾನು?

ನಾನು—ಪ್ರಳಯಕಾಲದ ಮನುಷ್ಯ ನೀನು!

ಮಹಾ—ಫಣೆಗಣ್ಣು ತೆರೆಯುವುದೇ?

ನಾನು—ಪಕ್ಕ ಆಯಿತು. ಎಲ್ಲಾ ಸುಟ್ಟತೆಂದರೆ ಮತ್ತೇನು ಉಳಿಯಿತು? ನಮ್ಮ ಸುಬ್ರಾಯಸೆಟ್ಟರ ಹಾಗೆ ಆಸ್ತಿ ಧ್ವಂಸಮಾಡಿದರೆ ನಾಳೆ ಏಕಾದಶಿ. ಸುಡ ಬಾರದು—ಸುಟ್ಟ ಹಾಗೆ ಆಗಬೇಕು. ಪೂಜಾರಿ ಬಂದರೆ-ಮೂಗು ಕೊಯ್ದು ಕೊಡು ಎನ್ನು. ಮಕ್ಕಳನ್ನು ಕೇಳಲಿಕ್ಕೆ ಬಂದರೋ—ಹೆಚ್ಚಾದವರಿಂದ ಕಡ ತಕ್ಕೊಳ್ಳಿ ಅನ್ನು. ತೆಂಗಿನ ಕಾಯಿ ಕಡಲೆ ಬೇಳೆ ತಂದರೇ—ಕುದುರೆಗೆ ಹಾಕಿ ಎನ್ನು. ನನಗೆ ತಲೆ ಬೇಕು! ನಿಮ್ಮಂತಹರ ತಲೆ! ಮಿದುಳಿಲ್ಲದ ತಲೆ! ಎನ್ನು.

ಮಹಾ—ಯಾರಾದರೂ ಆ ಶರ್ತದ ಮೇಲೆ ನನ್ನ ಬಳಿಗೆ ಬಂದಾರೆಯೇ? ನನಗೆ ಗುಡಿ ತಿರುಗಿ ಕಟ್ಟಿಸಿಯಾರೆಯೇ?

ನಾನು—ಎಲಾ ಅಷ್ಟು ಗೊತ್ತಾಗದೆ. ಸ್ವಸ್ತ ಊರಿಂದೂರು ತಿರುಗ ಬಾರದೆ ನನ್ನ ಹಾಗೆ. ಗುಡಿಕಟ್ಟಿ ಕೊಡುತ್ತಾರೆ ಎಂದು ಗುಂಡು ಕಲ್ಲಾಗಿ ಬಿದ್ದೇ ನಿನ್ನ ಅವಸ್ಥೆ ಹೀಗಾಯಿತು. ಹೊರಡು ಸರ್ಕೀಟಿಗೆ. ನಿನ್ನನ್ನು ಜನರು ನೋಡಬೇಕೆನ್ನುತ್ತಾರೋ—ಬರಲಿ ನಿನ್ನ ಹಿಂದೆ. ಇದ್ದಲ್ಲೇ ಬಿದ್ದಿದ್ದರೆ ಮರ್ಯಾದೆ ಬಂದೀತೆ?

ಅಷ್ಟು ಅಂದೆ. ಮಹಾಲಿಂಗನು ಮತ್ತೆ ಮಾತನಾಡಲಿಲ್ಲ. ನಾನು ಸಿಟ್ಟಾಗಿ ಹೊರಟೆ! ಆ ದಿನ ಸಂಜೆ ಮರಳಿ ಬರುವಾಗ ಮಹಾಲಿಂಗನ ತಲೆಯ ಮೇಲೆ ಕುಳಿತು—'ಹಾರುವ' ತಿರುಗಿ ಮಂತ್ರ ಹೇಳುತ್ತಿದ್ದ.

ಮುಂದಿನ ವರುಷ ಅಲ್ಲಿ ಒಂದು ಸ್ಕೌಟ್ ಕ್ಯಾಂಪ್ ಆಯಿತು. ಆ ದಿನ ಮಹಾಲಿಂಗನನ್ನು ಹಿಡಿದು, ಪಯಸ್ವಿನಿ ಕಲ್ಲಿನ ಮೇಲೆ ಉರುಳಿಸಿ—ಚಟ್ನಿ ಪುಡಿ ಮಾಡಿದ್ದರು.

ಆಶ್ಚರ್ಯವೆಲ್ಲಿ? ನಿಂತಲ್ಲೇ ನಿಂತರೆ ದೇವರಿಗೂ ಮರ್ಯಾದೆ ಇಲ್ಲ. ಸಂಚಾರಿ ಕಾಲಕ್ಕೆ ಸರ್ಕೀಟಿನ ದೇವರು ಬೇಕು.



Printed by V. Kuppaswami chetty. at Bharatamata press
39. Andreson St. Madras.